ಜಂಭಾರಿ ಬ್ರಹ್ಮ ಪರಿಯಂತರದೊಳೀ ಪರಿಯ ।
ತುಂಬಿ ತುಳುಕಾಡಿ ಮಣಿ ಗಣ ಸೂತ್ರದಂದಲಿ ॥ ೪ ॥

ಇಷ್ಟೂ ಹೇಳಿ ಆಕೆಗೆ, ಹೇಳಿದುದನ್ನೆಲ್ಲ ಕೇಳಿ ಮತ್ತೆಯೂ, "ವ್ಯಾಮಿಶ್ರೇಣೈವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ" ಎಂದ ನರನಂತೆ, ಸ್ವಭಾವ ಚಂಚಲ ವಾದ ಮನಸ್ಸು, 'ಇದಿಷ್ಟೂ ನಿಜವೇ ? ಇದೆಲ್ಲವೂ ಪ್ರಜ್ಞಾವಾದವಲ್ಲವೇ ?' ಎಂದುಕೊಂಡಿತೇನೊ ? ಅದಕ್ಕೂ ಸಮಾಧಾನವಿದೆ ಹಾಡಿನಲ್ಲಿ.—

ಬರಿಯ ಮಾರುತನಾಟವೆನ್ನದಿರು ಮಾನಸವೇ ! ನೀ ।
ನರಿಯದಂತಹ ಚಿದ್ಘನದ ರಹಸ್ಯ ಧರ್ಮಗಳ ॥
ವಿರತಿಗತಿಶಯವಾದ ಗುರುವೇಂಕಟಾರ್ಯಕನ ।
ಬಿಡದೆ ಸತ್ಯ ಜ್ಞಾನ ಪರಿಪೂರ್ಣನೆಂದು ತಿಳೀ ॥ ೫ ॥

(೫ರಿಂದ ೯ರ ವರೆಗಿನ ಹಾಡುಗಳು ಹೆಂಗುಸರೇ ಬರೆದವು.)

ಆ ವೇಳೆಗೆ ಯಜಮಾನರು ಬಂದಿದ್ದಾರೆ; ಊಟ ಉಪಚಾರಗಳು ನಡೆದಿವೆ. ಆಕೆಗೂ ಊಟವಾಗುವ ವೇಳೆಗೆ ಸುಮಾರು ಹೊತ್ತಾಗಿದೆ. ಆಕೆಯು ಆಗಿನ ಸಣ್ಣ ಪುಟ್ಟ ಕೆಲಸಗಳನ್ನ ಮುಗಿಸಿಕೊಂಡು ಬಂದು ನಡು ಮನೆಯಲ್ಲಿ ಕುಳಿತು ಕೊಳ್ಳುವ ವೇಳೆಗೆ ನೆರೆ ಹೊರೆಯ ಹೆಂಗುಸರೆಲ್ಲ ಬಂದಿದ್ದಾರೆ. ಎಲ್ಲರೂ ದಿನ ದಿನದ ಸುಖ ದುಃಖಗಳ ವಿಚಾರವನ್ನು ಅಷ್ಟಷ್ಟರಲ್ಲಿ ಮುಗಿಯಿಸಿ—ಸಂಗೀತ ಕಚೇರಿಯ ಆರಂಭದಲ್ಲಿ ವಾದ್ಯಗಳನ್ನು ಸಿದ್ಧ ಮಾಡಿಕೊಳ್ಳುವಾಗ ಕೇಳಿಬರುವ ಕರ್ಣ ಕಠೋರ ವಾದ ಅಪ ಶ್ರುತಿಗಳಂತೆ ಕ್ಷಣಿಕವಾಗಿ—ಪುರಾಣದ ಹಾಡುಗಳನ್ನು ಕೇಳುವುದಕ್ಕೆ ಕುಳಿತುಕೊಳ್ಳುತ್ತಾರೆ. ಸೌಭಾಗ್ಯವತಿಯೊಬ್ಬಳು ಹಾಡುವುದಕ್ಕೆ ಆರಂಭಿ ಸುತ್ತಾಳೆ.—

## ೧೦. ಪಾರ್ವತೀ ಕೊರವಂಜಿ *

ಶ್ರೀ ವೇಂಕಟೇಶ್ವರ, ಲಕ್ಷ್ಮೀದೇವಿ, ಗಂಗಾಧರೇಶ್ವರ, ಬಾಲ ತ್ರಿಪುರ ಸುಂದರಿ, ವಿಘ್ನೇಶ್ವರ, ಶಾರದಾ ದೇವಿಯರನ್ನು ಭಜಿಸಿ ದೇವ ಕವಿಗಳಂ ಕೊಂಡಾಡಿ.—

ವಚನ— . . . ಪಾರ್ವತೀ ದೇವಿಯು ದಶರಥ ರಾಯನ ಅರಸಿಯಾದ ಕೌಸಲ್ಯಾ ದೇವಿಗೆ ಪುತ್ರೋತ್ಸವದ ವಾರ್ತೆಯಂ ಪೇಳಿದ ಕೊರವಂಜಿ ಕಟ್ಟಳೆಯಂ ಯಕ್ಷಗಾನ ಕಥಾ ಪ್ರಸಂಗದಿಂ ಪೇಳ್ವೆನದೆಂತೆನೆ. . . .

---

* "ಹಳ್ಳಿಗಳಲ್ಲಿಯೂ ಚಿಕ್ಕ ಚಿಕ್ಕ ಊರುಗಳಲ್ಲಿಯೂ ಕಣಿಯನ್ನು ಹೇಳುವ ಹೆಂಗುಸರು 'ಕೊರವಂಜಿ' ಎಂಬ ಹಾಡುಗಳನ್ನು ಹಾಡುತ್ತ ಬರುವುದುಂಟು. ಈ ಹಾಡುಗಳಲ್ಲಿ, ಪ್ರಾಯಶಃ ಒಬ್ಬ ಪುರುಷನು ಸ್ತ್ರೀವೇಷವನ್ನು ಹಾಕಿಕೊಂಡು ತನ್ನ ಪ್ರಿಯೆಗೆ ಕಣಿ ಹೇಳುವ ನೆಪದಿಂದ ಅವಳ ಅನುರಾಗವನ್ನು ಸಂಪಾದಿಸುವ ಕಥೆಯು ಹೇಳಲ್ಪಡುತ್ತದೆ. 'ಅರ್ಜುನ ಕೊರವಂಜಿ', 'ಪಾರ್ವತಿಯ ಕೊರವಂಜಿ' ಮೊದಲಾದವು ಈ ಜಾತಿಯ ಗ್ರಂಥಗಳು. ಈ ಗ್ರಂಥಕರ್ತರು ಇಂತಹವರೆಂದು ಇನ್ನೂ ಗೊತ್ತಾಗಿಲ್ಲ. ಆದರೆ ಗ್ರಂಥದ ಶೈಲಿಯನ್ನೂ ಪ್ರಯೋಗದ ರೀತಿಯನ್ನೂ ನೋಡಿದರೆ ಇವರು ಆಧುನಿಕ ಕವಿಗಳೆಂದು ತೋರುತ್ತದೆ" ಎಂದು ವಿದ್ಯಾಭ್ಯಾಸದ ಇಲಾಖೆಯ ಪದ್ಯಸಾರದಲ್ಲಿ (ಕ್ರಿ. ೧೯೩೪: ಪ್ರಥಮ

* * * *

ಅವನೀಶ ದಶರಥೇಶ್ವರನರ್ತಿಯಿಂದ ।
ಕೌಸಲ್ಯೆ ಸೌಮಿತ್ರಿ ಕೈಕೆಯಾರಿಂದ ॥
ಬಹು ಭಾಗ್ಯಯುತನಾಗಿ ವನಿತೆಯರೊಡಗೂಡಿ ।
ಧರೆಯ ಪಾಲಿಸುತಿರ್ದ ಧರ್ಮವೃತ್ತಿಯಲಿ ॥

(ಹೀಗಿರುವ ಅರಸನು ಒಂದು ದಿನ, ತನಗೆ ಸಂತಾನವಿಲ್ಲವೆಂದು ತನ್ನ ಸತಿಯೊಳು ಪೇಳಿ ಚಿಂತಿಸುತಿರ್ದನದೆಂತೆನೆ—)

ಸೊಬಗಿನ ಸೋನೆ ವರ್ಣ

ಒಪ್ಪುವ ರಾಯರೊಳ್ ಬಂಜೆ ಯೆಂಬರು ಯೆನ್ನ ।
ಪುತ್ರ ಸಂತಾನ ಯೆನಗಿಲ್ಲ ॥ ೨ ॥

* * * *

ಅಂತ್ಯ ಕಾಲಗಳೊದಗಿದ ಮೇಲೆ ಗತಿಯಿಲ್ಲ ।
ಸಂತಾನವಿಲ್ಲದ ಬಳಿಕ ॥ ೫ ॥

* * * *

ತ್ಯಾಗಮನೆ—ಆಟ ತಾಳ

ನಾವು ಮುನ್ನ ಪಡೆಯಲಿಲ್ಲ ಎಲೆ ನಾರಿ ।
ಬ್ರಹ್ಮ ಫಣೆಯೊಳಗೇನ ಬರೆದಿಹನೊ ಎಲೆ ನಾರಿ ॥ ೧ ॥
ಪೂರ್ವ ಜನ್ಮದಲಿನ್ನು ಎಲೆ ನಾರಿ ನಾವು ।
ಯಾರ ನೋಡಿ ಕರಗಿದೆವೋ ಎಲೆ ನಾರಿ ॥ ೩ ॥
ಶರಿದೇವೋ ದಾರೀಯ ಮರನ ಎಲೆ ನಾರಿ ನಾವು ।
ತೊರೆಸಿದೆವೊ ಗಿಳಿಯ ಮರಿಯ ಎಲೆ ನಾರಿ ॥ ೬ ॥
ಭವ ಭವಗಳಿಂದ ಎಲೆ ನಾರೀ ನಾವು ।
ಶಿವನ ಪೂಜೆ ಮಾಡಲಿಲ್ಲ ಎಲೆ ನಾರಿ ॥ ೭ ॥

---

ಭಾಗ, ಪುಟ ೧) ಹೇಳಿದೆ. (These poems belong to) the class Kuṛiñji, *i.e.*, those that deal with the pre-nuptial love, characteristic of the hill country. *Vide*: P. T. Srinivasa Iyengar's *History of the Tamils*, page 165. But his observation that—"such poems are characterised by the fact that the Sanskirt words do not occur in them. Moreover, the customs referred to in them are pure Tamil ones; there is no reference at all to Aryan ideas"—does not seem to hold good in respect of the Kannada Koravanji songs.

ಅರ್ಜುನ ಕೊರವಂಜಿ, ಕೃಷ್ಣ ಕೊರವಂಜಿಗಳೇನೋ ನಾಯಕನು ನಾಯಿಕೆಯ ಅನುರಾಗ ಸಂಪಾದನಾರ್ಥವಾಗಿ ವೇಷಧಾರಿಯಾಗಿ ಹೋದ ಕಥೆಗಳನ್ನು ಹೇಳುವವೇ ಅಹುದು. ಆದರೆ, ಪಾರ್ವತಿಯ ಕೊರವಂಜಿಯ ಕಥೆ (ಕಟ್ಲೆ ?) ಯುು ಹಾಗಲ್ಲವೆಂದು, ಉದಾಹರಿಸಿರುವ ಭಾಗದಿಂದಲೇ ಸ್ಪಷ್ಟವಾಗುವುದು.

ಉದಾಹರಿಸಿರುವ ಹಾಡಿನಲ್ಲಿರುವ ವೈವಿಧ್ಯವನ್ನು ನೋಡಿರಿ. ಪಟ್ಟದಿಗಳ ಖಂಡಗಳನ್ನು ತ್ರಿಪುಡೆ, ಜಂಪೆ ಎಂಬ ತಾಳಗಳ ಹೆಸರಿನಿಂದ ವ್ಯವಹರಿಸಿರುವುದನ್ನು ಗಮನಿಸಿರಿ.

(ಎಂದು ಚಿಂತಿಸಲು) ಕೌಸಲ್ಯೆಯು—

ಕಂ॥ ಎನ್ನಾಳ್ದವರೇ ಕೇಳಿರಿ ।
ಚೆನ್ನಾಗಿಯೆ ವಿಧಿಯು ನಮ್ಮ ಫಣೆಯೊಳು ಲಿಖಿಸೇ ॥
ಇನ್ನುಂ ಪುತ್ರರ ಪಡೆವೆವು ।
ಮನ್ನಣೆಯೊಳು ಬಾಳ್ವೆವೀಗಲಿನ್ನೀ ಧರೆಯೊಳ್ ॥

ಎಂದು ಸಮಾಧಾನ ಹೇಳುತ್ತಿದ್ದಳು. ಆ ಸಮಯದಲ್ಲಿ ನಾರದ ಮುನೀಶ್ವರನು ಬಂದನದೆಂತೆನೆ.—

ದ್ವಿಪದಿ ॥ ಕಟ್ಟಿದ ಜಡೆ ಸುತ್ತ ಕೈಯ್ಯಲ್ಲಿ ವೀಣೆ ।
ತೊಟ್ಟ ರುದ್ರಾಕ್ಷಿಯ ಭಸಿತ ತ್ರಿಪುಂಡ್ರ ॥

ಉಟ್ಟ ಧವಳಾಂಬರವು ಒಲಿವ ಜಪ ಸರವು ।
ಮೆಟ್ಟ ಪಾದುಕೆ ವರ ಕೃಷ್ಣಾಜಿನವು ॥

ನೊಸಲ ಕಸ್ತೂರಿ ತಿಲಕ ಕೊರಳ ಶ್ರಾವುಡವು (?)
ಸಲ್ಲಲಿತ ಕರದಲಿ ದಂಡಾಕ್ಷಮಾಲೆ ।

ಕೆಂಜೆಡೆಯು ಸುಲಿ ಪಲ್ಲು ಕೇರಿ ಕೇರಿಯೊಳು ।
ಕಂಜ ನೇತ್ರನ ಸುತಿಯ ಪಾಡುತ ಬಂದ ।

ಅರಸನು ಆತನಿಗೆ ಭಕ್ತಿಯಿಂದ ಷೋಡಶೋಪಚಾರಗಳನ್ನು ಮಾಡಿದನು. ನಾರದನು—

ತ್ರಿಪುಡೆ ॥ ಚಿಂತೆಯಾತಕೆ ನಿನ್ನ ಗರ್ಭದಿ ।
ಕಂತುವನು ಪಡೆದಾತ ಬರುವನು ।
ಮುಂತೆ ರಾಮಾವತಾರದಲಿ ನಿನಗುದಯಿಸುವ ಮುದದಿ ॥ ೧ ॥

ಎಂದು ಆಶ್ವಾಸನ ಮಾಡಿದನು. ಈ ವಿಚಾರವನ್ನು ಅರಸನು ಗುರು ಪುರೋಹಿತ ಮಂತ್ರಿಗಳಿಗೆ ತಿಳಿಸಲು, ಅವರು—

ತ್ರಿಪುಡೆ ॥ ಪುತ್ರ ಕಾಮೇಷ್ಟೀಯ ಮಾಡಿಸು ।
ಪೃಥ್ವಿಪತಿ ಕೇಳ್ ನಿನ್ನ ಜಠರದಿ ।
ಅರ್ಥಿಯಿಂದಲಿ ಸುತರು ಜನಿಪರು । ಕೀರ್ತಿ ಸಂಯುತರು ॥ ೨ ॥

ಎಂದು, ಅದಕ್ಕೆ ಬೇಕಾದ ಸನ್ನಾಹಾದಿಗಳನ್ನು ವಿವರಿಸಿದರು. ಅರಸನು ಅವರು ಹೇಳಿದಂತೆ ಕಾಮೇಷ್ಟಿಯನ್ನು ಆಚರಿಸಿ ದೈವಾನುಗ್ರಹವನ್ನು ಪಡೆದನು. ಆತನ ಹೆಂಡತಿಯರು ಗರ್ಭವತಿಯರಾದರು.

ಇತ್ತ, ಪರಮೇಶ್ವರನು ಪಾರ್ವತಿಯನ್ನು ಕರೆದು—

ಏಕ ತಾಳ ॥ ಕೊರವಂಜಿ ವೇಷದಲಿ ಧರೆಗೆ ಪೋಗುವುದು ॥ ೧ ॥
ಅರಸಿ ಕೌಸಲೆಗೆ ನೀ ಕಣಿಯ ಹೇಳುವುದು ॥ ೨ ॥

ಎಂದು ಕಟ್ಟಳೆಯಂ ಮಾಡಿದನು.

ಆಕೆಯು, 'ಅಪ್ಪಣೆ'ಯೆಂದು ಕೈಮುಗಿದು, ವಿನಾಯಕನನ್ನು ಮಗು ಮಾಡಿ
"ಬೆನ್ನಿನೊಳ್ ಅಳವಡಿಸಿಕೊಂಡು । ಪರಮೇಶ್ವರಂಗೆ ವಂದಿಸಿ ಕಳುಹಿಸಿಕೊಂಡು"—

ಕಂದ ॥ ಸುರಗಿ ಸುರಹೊನ್ನೆ ಕೇದಿಗೆ ।
ಯಿರುವಂತಿಗೆ ಜಾಜಿ ಪುಷ್ಪ ಮಲ್ಲಿಗೆಯರಲಂ ॥
ತುರುಬಿನೊಳು ತುಂಬಿ ಮೆರೆಯುತ ।

* * *

ಹರುಷದೊಳು ಗಿರಿಜೆ ಬಂದಳು ।
ಅರಸಿಯು ಕೌಂಸಲೆಗೆ ಕಣಿಯನರುಹುವೆನೆನುತಂ ॥

ಆ ಕೊರವಂಜ ವೀಧಿಕಾಗ್ರದೊಳ್ ಬರುತಿರ್ದಳದೆಂತೆನೆ.—

ಸಂಗೀತ ವರ್ಣ

ನೆತ್ತಾದ ಹಲಿಗೆಯಂದದಿ ಚಿನ್ನದ ನಳಿ ತೋಳು ।
ಮತ್ತ ಗಜದ ಮಸ್ತ ಕರವು ॥ ೧ ॥

ಚಿತ್ರಾದ ಪ್ರತಿಮೆಯಂದದಿ ರೂಪು ಸೊಬಗುಳ್ಳ ।
ಯಿತ್ರಾಣ ಕೊರವಂಜಿಯಿವಳೂ ॥ ೨ ॥

ರಂಗೂ ನೀಲದ ಬಳೆ ಮುಂಗೈಯ್ಯ ಮೂರಾರಿ ।
ಶೃಂಗಾರ ನಡುವಿನೊಡ್ಯಾಣ ॥ ೩ ॥

ಮುತ್ತೀನ ಮುಡಿ ಮಿಸುನೀಯ ಕಂಕಾಣಗಳು ।

* * *

ಹಿಡಿದ ಕೈಯೊಳು ಹೊನ್ನ ಬೆತ್ತ (ಎಡದಾ?) ॥
ಕಡು ಚೆಲ್ವೆ ಶಿಶುವು ಬೆನ್ನಿನೊಳಿರೆ ಕೊರವಂಜಿ ।
ಮಡದಿ ಬಂದಳು ಕೇರಿವೊಳಗೆ ॥ ೧೧ ॥

ಕಸ್ತೂರಿ ಮೃಗ ಬಂದ ಬಟ್ಟೆಯೊಳಾದುದು ।
ವಿಸ್ತಾರಿಸುವರಳವಲ್ಲಾ ॥ ೧೨ ॥

ಹೀಗೆ ಬಂದ ಕೊರವಂಜಿಯನ್ನು ಕೌಸಲ್ಯೆಯು ಕಂಡು ತನ್ನ ಕಡೆಯವರಿಂದ ವಿಚಾರಿಸಿ, "ದಶರಥನರಸಿಗೆ ಪುತ್ರ ಸುವಾರ್ತೆಯ ಹೇಳಬಂದ" ಳೆಂದು ತಿಳಿದು, ಅವಳನ್ನು ತನ್ನ ಸೌಂದರ್ಯ ವಿಲಾಸದ ತೊಟ್ಟಿಗೆ ಕರೆಯಿಸಿಕೊಂಡಳು. ಆ ಕೊರವಂಜಿಗೆ ಪರಿಚಾರಕರ ಕೈಯಿಂದ ಉಪಚಾರಂಗಳಂ ಮಾಡಿಸಿ, ಕಣಿಯ ಕೇಳುವುದಕ್ಕೆ ಅಲಂಕಾರ ಭೂಷಿತೆಯಾಗಿ ಬರುತಿರ್ದಳದೆಂತೆನೆ.—

ಏಕ ತಾಳ

ಪರಿಮಾಳ ತೈಲವನೊತ್ತಿ ಪನ್ನೀರು ಜಳಕ ಗೈದು ।
ಅಗಿಲು ಕುಂಕುಮ ಗಂಧ ಅಂಗಕ್ಕೆ ಪೂಸಿ ॥ ೧ ॥

ಕಾಂಚೀ ದಾಮವನುಟ್ಟು ಕನಕ ಭೂಷಣವಿಟ್ಟು ।
ವಾಂಛಲ್ಯ ಮನದೊಳಿಟ್ಟು ಒಪ್ಪಾದಿಂ ಪೊರಟೂ ॥ ೨ ॥

ಬಂದು ರತ್ನ ಗದ್ದಿಗೆಯೊಳು ಮಂಡಿಸಿದಳು. ಎದುರು ಕುಳಿತಿರುವ ಕೊರವಂಜಿಯ ರೂಪವನ್ನು ನೋಡಿ ಆಶ್ಚರ್ಯಪಟ್ಟು—

ನಾನು ನಿನ್ನಂತ ರೂಪು ಕಾಣೆ ಕೊರವಂಜಿ ।
ಮಂಡಾಲದೊಳು ಚೆಲ್ವೆ ಕೊರವಂಜಿ ನಿನ್ನಾ ।
ಗಂಡಾ ನಿನ್ನೆಂತೋನೆ ಕೊರವಂಜಿ ॥

ಎಂದು ಕೇಳಿದಳು. ಅದಕ್ಕೆ ಉತ್ತರವಾಗಿ—

ನನ್ನ ಗಂಡನು ।

ಭೂತ ಹಿಂಡುಗಳೊಳಗೆ ಪುಲಿಯ ಚರ್ಮವ ಪೊದ್ದು ।
ಭೂತಳವ ಚರಿಸುವನು ಬೂದಿಯನು ಪೂಸಿ ॥ ೩ ॥

ಕಣ್ಣು ಕೆಂಪಗೆ ಮಾಡಿ ಕರದಿ ಬುರುಡೆಯ ಪಿಡಿದು ।
ತನ್ನ ತಾನರಿಯದೇ ತಾಂಡವಾಡುವನೂ ॥ ೪ ॥

ವಿಷವ ಕೊರಳೊಳಗಿಟ್ಟು ವೀರನಂದದಿ ಬಹನು ।
ಮಸೆದಲಗು ಮೂರರಿಂದ ಮಾತನಾಡಿಸುವನೂ ॥ ೫ ॥

*  *  *

ಮರಿ ಹಾವುಗಳ ಸುತ್ತಿ ಆಲದೆಲೆಯ ಹೆಗಲಲ್ಲಿ (?)
ಶಿರದ ಮೇಲೊಂದು ನೀರ ಕೊಡನ ಹೊತ್ತಿಹನೂ ॥ ೮ ॥

ಸೊಲ್ಲಿಸಲು ಸುಮ್ಮನೆಯೆ ಕಲ್ಲಿನಂದದಿ ಯಿರುವ ।
ಬಲ್ಲವರ ಬಾಗಿಲನು ಕಾಯ್ದುಕೊಂಡಿಹನು ॥ ೯ ॥

ಹೀಗೆಯೇ, ವ್ಯಂಗ್ಯವಾಗಿ ತನ್ನ ತವರು, ತನ್ನ ಸವತಿ, ತನ್ನ ಮಕ್ಕಳು ಮೊದಲಾದ ವಿಷಯಗಳನ್ನೆಲ್ಲ ಯಥಾವತ್ತಾಗಿ ವರ್ಣಿಸಿ ಹೇಳಿ, ತಾನು "ಹರಿ ಹರ ಬ್ರಹ್ಮೇಂದ್ರ ಸುರ ಮುನಿಗಳ ಹದಿನಾಲ್ಕು ಪರ ಲೋಕದರಿಕೆಯವಳು, ದುಂಡಿ ಕೈ ಮುಗಿದು ಕೇಳು ಕಣಿಯಾ" ಎಂದಳು. ಆಗ—

ರಾಗ—ಭೂಪಾಳಿ, ದ್ವಿಪದ

ಮುತ್ತಿನ ಗದ್ದುಗೆ ಕೊರವಂಜಿಗಿತ್ತು ।
ರತ್ನ ಪೀಠದ ಮೇಲೆ ಕುಳಿತು ಕೌಸಲ್ಯೆ ॥ ೧ ॥

ಹೊನ್ನ ಮೊರದೊಳಗೊಂದು ವಕ್ಕಳ ಮುತ್ತು ।
ಕನ್ಯೆ ಬೇಗದಿ ತಾನೆ ಕಾಂತೆ ಮುಂದರಿಸೆ ॥ ೨ ॥

ಮನಸಿನಲಿದ್ದಂತಾ ಮಾತ ಪೇಳುವೆನು ।
ನೀನೆನೆಸಿದ ನೆನೆಪೆಲ್ಲ ನೆಲೆಯಾಗಿ ॥ ೪ ॥

ತರುಣಿ ಯೆನ್ನ ಮಾತು ತವೆಯುಮೃತ ವಾಕ್ಕು ।
ಕರೆಯು ಕಾಣಿಸದು ಕೊಲ್ಲಾಪುರದಮ್ಮ ನಾಣೆ ॥ ೫ ॥

ಅನುಕೂಲವಾದಮೇಲಮ್ಮ ಕೇಳೆನ್ನ ।
ನೆನೆಸುತ್ತಲಿರು ಎಂದು ನೇಮದೊಳಂದು ॥ ೬ ॥

ವಚನ ॥ ಇಂತೆಂದು ಮುತ್ತಿನ ಶಾಸೆಯಂ ಮೂರು ಗುಡ್ಡೆಯಂ ಮಾಡಿ ಪಣೆಗೆ ಕೈಯಂ ನೆಗಪಿ ಚಿನ್ನದ ಬೆತ್ತಮಂ ಪಿಡಿದು ಚದುರೆ ಸಂತೋಷವಡೆದು ಕೊರವಂಜಿ ಕಣೆಯ ಪೇಳುವುದಕ್ಕೆ ತನ್ನ ಇಷ್ಟ ದೇವತಾ ಪ್ರಾರ್ಥನೆಯಂ ಗೈದಳದೆಂತೆನೆ.—

ರಾಗ ॥ ಪೋ ಕೊಲ್ಲಾಪುರದಮ್ಮ ಗೋವಿಂದ ರಾಜ ।
ಸೊಭಾನದ್ಯೆಯ್ಯನ ಸೋಮೇಶ ಲಿಂಗ ।
ಕೊಂಡಲಗಿರಿ ತಿಮ್ಮ ಕೋನೇಟಿ ರಾಯ ।
ಚೆಲುವ ಅಹೋಬಲ ರಾಯ ಜಾನಕೀ ರಮಣ ॥

ಕಂಬದ ರಾಯನೆ ಕಕುದ್ಗಿರೀಶ ಕಲ್ಯಾಣ ಬಸವಂಣ ।
ಕರುಣದ ರಂಗಾ ಕಾಮ ನಂದೀಶನೆ ಪೆಂನೋಬಳೈಯ್ಯ ।
ಹಂಪೆಯ ವಿರುಪಾಕ್ಷ ಹರನೆ ನಂಜುಂಡ ॥

ಹೀಗೆಯೇ, ನಾಲ್ಕು ದಿಕ್ಕುಗಳಲ್ಲಿಯೂ ಪ್ರಸಿದ್ಧರಾದ ದೇವಾದಿ ದೇವರನ್ನೆಲ್ಲ ವಂದಿಸಿ, " ತನಗೆ ಸೊಲ್ಲು ಕೊಡು ಎಂದು ಬೇಡಿಕೊಂಡಳು ಸೊಬಗಿನಿಂದಾ " —

ಯಾಲ ಪದ

ಒಂದ ಲೇಸಾ ನೆನೆದೇಯಮ್ಮಾ ವನಿತೆ ನಿನ್ನ ಗರ್ಭದಲ್ಲಿ ।
ಮಂದರಾ ಧರನು ಜನಿಸ್ಯಾನೆ ಕೌಸಲ್ಯಾದೇವಿ ಕಂದನಾಗೀ ವಿಷ್ಣು ರೂಪಿನಲಿ ॥ ೧ ॥

ವನ್ನೆ ರನ್ನೆ ಮೂಲೆ ನಾಲೆ ಒಂಭತ್ತಾನೆ ತಿಂಗಳೊಳಗೆ ।
ಗಂಡು ಮಗ ಕಡು ಚೆಲ್ವಾನೆ ಕೌಸಲ್ಯಾದೇವಿ ।
ಚಂಡ ದೈತ್ಯರನ್ನು ಕೊಲ್ವನೆ ॥ ೨ ॥

ನನ್ನ ಮಾತು ಸಟೆಯೆನ್ನಬೇಡ ನಿನ್ನ ಗರ್ಭಾದಲ್ಲಿ ಕೇಳು ।
ಚೆಲ್ವ ರಾಮ ಜನಿಸಿ ಬರುವಾನೇ ಕೌಸಲ್ಯಾದೇವಿ ।
ಚೆನ್ನಾಗಿ ಕೇಳಮ್ಮ ಕಣೆಯಾ ॥ ೩ ॥

ಎಂದು ಹೇಳಿ, " ಬ್ರಹ್ಮನ್ಯೆಯ್ಯನು ಎಂತು ಮರ್ತ್ಯಕ್ಕೆ ಯೆನ್ನ ಗರ್ಭದಿ ಬರುವ " ಎಂದು ಸಂಶಯಪಟ್ಟ ಕೌಸಲ್ಯೆಗೆ ದೈತ್ಯ ಭೀತರಾದ ದೇವತೆಗಳಿಗೆ ವಿಷ್ಣುವು ವರ ಪ್ರದಾನ ಮಾಡಿರುವ ಕಥೆಯನ್ನು ಹೇಳಿ ನಂಬಿಸಿದಳು. ಕೌಸಲ್ಯೆಯು ಸಂತುಷ್ಟಾಂತರಂಗಳಾಗಿದ್ದರೂ ಮಾನವ ಸ್ವಭಾವವನ್ನು ಅನುಸರಿಸಿ ಹೇಳಿದಳು—

ರಾಗ—ವರಾಳಿ

ಮಕ್ಕಳ ಪುಣ್ಯವ ಮಡದಿ ನೋಂತುದಿಲ್ಲ ಮಂದಯಾನೇ ।
ಚಿಕ್ಕ ವಯಸು ಹೋದ ಮೇಲೆ ಯೆಲ್ಲಿಯ ಮಕ್ಕಳು ಮಂದಯಾನೇ ॥ ೧ ॥

ಅಕ್ಕ ನಿನ್ನಯ ಮಾತು ಅನುಕೂಲವಾದರೆ ಮಂದಯಾನೇ ನಿನಗೆ ।
ಚೊಕ್ಕ ಚಿನ್ನದುಡಿಗೆಯ ತೊಡಿಸುವೆನಮ್ಮ ಮಂದಯಾನೇ ॥ ೨ ॥

* * *

ಮದನನ್ಯೆಯನು ಯೆನ್ನ ಮಗನಾದುದುಂಟಾಗೆ ಮಂದಯಾನೇ ।
ನಿನಗಿದುರೆದ್ದು ನಾನಿಷ್ಟ ದೈವವೆಂದು ಕಾಂಬೆನು ಮಂದಯಾನೇ ॥ ೬ ॥

## ಹೆಂಗುಸರ ಹಾಡುಗಳು

ಕೊರಚಿಯು ಮತ್ತೆ ರಾಮಾಯಣದ ಕಥೆಯನ್ನೆಲ್ಲ "ಕಂದ, ತಂದ, ಕೊಂದ," ಎಂಬ ಮೂರು ಮಾತಿನಲ್ಲಿ ಮುಗಿಯುವಂತೆ ಹೇಳಿ ನಂಬಿಸಿದಳು. ಇವಳಿತ್ತ ಇಂತೆಂದು ವಿವರಂಗಳಂ ಪೇಳುತ್ತಿರಲು, ಅತ್ತ ಸಿಂಗಾಸಾಸಿಯನರಸುತ್ತ ಯರುಕಲಸಿಂಗನು ಬಂದನದೆಂತೆನೆ.—

### ಯಾಲ ಪದ

ಬಲ್ಲಿ ನಾಮ ಫಣೆಯೊಳಿಟ್ಟು ಜಲ್ಲಿ ಕೊಕ್ಕರೆ ಗರಿಯ ಸುತ್ತಿ ।
ಯೆಲ್ಲ ದಿಕ್ಕು ನೋಡಿ ನಗುತಲೀ ವ್ಪೋ ಸಿಂಗಿಯೆನುತಾ ।
ಜೊಲ್ಲು ವೀಳ್ಯವು ಸೋರುತ ಬಾಯೊಳು ॥ ೧ ॥

ಕಂಕುಳೊಳಗೆ ಒಂದು ಬುಟ್ಟಿ ಕೈಯಲ್ಲಿ ಕಪಿ ಹಾವುಗಳೂ ।
ಡೊಂಕು ನಡುವಿಗೊಂದು ಕುಡುಗೋಲು ವ್ಪೋ ಸಿಂಗಿಯೆನುತಾ ।
ಶಂಕೆಯಿಲ್ಲದೆ ಬಂದ ಸಿಂಗಾನು ॥ ೨ ॥

ಚಿಕ್ಕು ಕಣ್ಣು ಭೇರಿ ಹೊಟ್ಟೆ ಚಿಕ್ಕೀದಂತೆ ವಾರೆ ಮೂಗು ।
ಚಿಕ್ಕ ವುಳ್ಳೀ ಗಡ್ಡೆ ವಿಾಸೆಯೂ ವ್ಪೋ ಸಿಂಗಿಯೆನುತಾ ।
ಅಕ್ಕರಿಂದ ಬಂದಾ ಸಿಂಗಾನು ॥ ೩ ॥

ಬಾನೆಯಂತೆ ಬಾಯಿದೆರೆಯು ಬಾಯುದುಟಿ ವಿಾರಿದ ಹಲ್ಲು ।
ಕಾಣ ಕಡ್ಡಿಯಂತೆ ಕೈಕಾಲು ವ್ಪೋ ಸಿಂಗಿಯೆನುತಾ ।
ವಾರೆ ನೋಟದಿಂದ ನಗುತಾ ॥ ೪ ॥

ಹಕ್ಕಿಗಳ ಕಾಲಾ ಹುರಿಯು ಸೆಕ್ಕಿದೊಂದು ಕಂಬಳಿಯು ।
ದಿಕ್ಕು ದಿಕ್ಕು ನೋಡಿ ನಗುತಾ ವ್ಪೋ ಸಿಂಗಿಯೆನುತಾ ।
ಚೊಕ್ಕ ಕೊರಚಿಯ ಕಾಣೆರೆನುತ ॥ ೫ ॥

ಅತ್ತಲಾ ಪಾರ್ವತಿದೇವಿಯಾದ ಕೊರವಂಜಿಯು ಕೌಸಲ್ಯಾದೇವಿಗೆ ಪುತ್ರೋತ್ಸವದ ವಾರ್ತೆಯಂ ಪೇಳಿ ಅಪ್ಪಣೆಯಂ ಕೇಳಲು, ಕೌಸಲ್ಯಾದೇವಿ ಕೊರವಂಜಗೆ ಮುತ್ತು ರತ್ನಂಗಳಂ ಬುಟ್ಟಿಯೊಳ್ತುಂಬಿ ಬುರುಕನಿಗೆ (ಮಗುವಿಗೆ) ಹಾಲು ತುಪ್ಪವನೆರೆದು ಅನೇಕ ವಸ್ತ್ರಾಭರಣಗಳಿಂದ ಅಲಂಕರಿಸಿ ಕಳುಹಿದಳು. ಕೊರಮನೂ ಕೊರವಂಜಿಯೂ—

ಅಕ್ಕಯ್ಯ ನೋಡಿಂತಾ ಅತಿ ಚೋದ್ಯವಾದಂತಾ ।
ಚಿಕ್ಕ ಪ್ರಾಯದ ಕೊರಚಿ ಚೊಕ್ಕ ರೂಪಿನವಳೂ ॥ ೧ ॥

ಪೂರ್ವ ಕಾಲದಿ ಬ್ರಹ್ಮ ಬರೆದಿಟ್ಟ ಲಿಖಿತ ।
ವಿಾರಲಾರಳವಮ್ಮ ಧಾರುಣಿಯ ಜನಕೆ ॥ ೨ ॥

ಚಿಕ್ಕ ಪ್ರಾಯದಾ ಕೊರಚಿ ಮುಪ್ಪಿನ ಕೊರಮನಿವ ।
ಅಕ್ಕಯ್ಯ ನೋಡಿರೆ ಅತಿ ಚೋದ್ಯಗಳನು ॥ ೩ ॥

ಎಂದು ವಿಸ್ಮಯ ಪಡುತ್ತಿರುವ ಪುರ ಜನಗಳನ್ನು ನೋಡುತ್ತ ತಮ್ಮ ಕೈಲಾಸಕ್ಕೆ ತೆರಳಿದರು.

ಸಂಗೀತ ವರ್ಣ

ಧರೆಯೊಳಗೀ ಕೃತಿ ಕೇಳ್ದು ಹೇಳ್ದವರಿಗೆ ।
ಹರ ಕೊಡುವ ಇಷ್ಟಾರ್ಥಗಳನೂ ॥ ೧ ॥

* * * *

ದ್ವಿಪದ ॥ ಶೇಷಾಚಲೇಶ್ವರ ಚೆಲುವ ವೇಂಕಟಗೆ ।
ಸಾಷ್ಟಾಂಗದಿಂ ನಮಿಸಿ ಸದ್ಭಕ್ತಿಯಿಂದ ॥ ೫ ॥

ಮೆಳೆಯ ಕೋಟೆಯ ತಿರುಮಲ್ಲಯ್ಯನ ಕುಮಾರ ।
ಇಳೆಯೊಳು ಗೋವಿಂದ ವೇಂಕಟ ಕವಿಯು ॥ ೬ ॥

ಧರೆಯೊಳಗಾಚಂದ್ರ ತಾರಾರ್ಕಮಾಗಿ ।
ಸ್ಥಿರದಿಂದಲಿರುವಂತೆ ಹರಸಿ ಈ ಕೃತಿಯ ॥ ೭ ॥

ವಿರಚಿಸಿದನು.

ಮಂಗಳ ॥ ಗಂಗೆಯನು ಪೊತ್ತು, ಶಿವ ಲಿಂಗ ರೂಪಾದವಗೆ ।
ಹಿಂಗದೇ ಭಕ್ತರನು ಪರಿಪಾಲಿಪಗೇ ॥
ಬೆಂಗಳೂರಿನ ರಂಗಧಾಮನಾ ಮೈದುನಗೆ ।
ಅಂಗನೆಯರೆಲ್ಲರಾರತಿಯ ಬೆಳಗೀರೆ ॥
ಜಯ ಮಂಗಳಂ ನಿತ್ಯ ಶುಭ ಮಂಗಳಂ ॥

[ಹೀಗೆಯೇ, ಯಕ್ಷಗಾನವಾಗಿ ಬರೆದಿರುವ ರಾಮಾಯಣ, ಭಾಗವತ, ಭಾರತಗಳೆಲ್ಲ ಉಂಟು. ಅವುಗಳಲ್ಲಿ ಮೂಲ ಗ್ರಂಥವನ್ನು ಅನುಸರಿಸಿಹೋಗಬೇಕೆಂಬ ನಿಯಮವನ್ನು ಅಷ್ಟು ಕಟ್ಟುನಿಟ್ಟಾಗಿ ಪಾಲಿಸಿರುವಂತೆ ತೋರುವುದಿಲ್ಲ. ಮೈಸೂರು ಓರಿಯಂಟಲ್ ಲೈಬ್ರೆರಿಯ ಅಮುದ್ರಿತ ಪುಸ್ತಕಗಳ ಪಟ್ಟಿಯನ್ನು ತೆಗೆದು ನೋಡಿದರೆ ಈ ಯಕ್ಷಗಾನ ಸಾಹಿತ್ಯವು ಎಷ್ಟಿದೆಯೆಂಬುದು ವ್ಯಕ್ತವಾಗುವುದು. ಮತ್ತೊಮ್ಮೆ ಈ ಯಕ್ಷಗಾನವನ್ನು ಕುರಿತು ಪ್ರಸ್ತಾಪಿಸಬೇಕಾಗಿರುವುದರಿಂದ ಈಗ ಇಲ್ಲಿಗೇ ಬಿಟ್ಟು ಮುಂದಕ್ಕೆ ಹೋಗೋಣ.]

ಈ ವೇಳೆಗೆ ಎಲ್ಲರಿಗೂ ಮನೆಗೆ ಹೋಗುವ ಹೊತ್ತಾಗಿದೆ. ಆದರೂ ವಿನೋದ ಪ್ರಿಯರು ಇಲ್ಲದೆ ಇರುವುದುಂಟೆ? ಒಬ್ಬರು ಪಸಂದು ಮಾಡಿ ಒಂದು ವಿನೋದದ ಪದವನ್ನು ಮತ್ತೊಬ್ಬರಿಂದ ಹಾಡಿಸುತ್ತಾರೆ.—

೧೧. ಇಂದು ನಮಗೆ ಏಕಾದಶಿ ॥ ಪ ॥
ತಿಂದು ಬಂದೆವು ನಲವತ್ತು ದೋಶಿ ॥ ಅ ॥

ಹದಿನೇಳು ಕೋಡಬಳೆ । ಕಡಲೇಬೇಳೆ ವುಸುಳಿ ॥
ಅದರ ಮೇಲೆ ನೆಲಗಡಲೆ । ಹೆದರಿಕಿಲ್ಲದೆ ಹೇಳ್ತೇನೆ ಕೇಳಿ ॥ ೧ ॥

ಅವಲಕ್ಕಿ ಹಾಲು ಸಕ್ಕರೆ । ಸೌತೆಕಾಯಿ ಕೋಸುಂಬರಿ ॥
ಬಾಳೆಹಣ್ಣು ಹೊಸ ಬೆಲ್ಲವು । ವುತ್ರತ್ತಿ ಮೇಲ್ ದ್ರಾಕ್ಷಿಯು ಕೊಬ್ಬರಿ ॥ ೨ ॥

ತಾಲಿಪಿಟ್ಟು ಉಪ್ಪಿಟ್ಟು । ಕಲಸಿದ ಮೆಂತ್ಯದ ಹಿಟ್ಟು ॥
ಚೆನ್ನಾಗಿ ಮುಗಿಸಿಟ್ಟು । ಕರಿದ ಕಡಬುಗಳು ಮೇಲೇಳೆಂಟು ॥ ೩ ॥

ನೆರೆಮನೆಯ ಒಬ್ಬಾಕೆ, "ಹೇಗಿದ್ದರೂ ಹೊತ್ತಾಯಿತು ; ಆ ಆಕಳ ಹಾಡು ಒಂದು ಹೇಳಿಬಿಡಿರಮ್ಮಾ, ಕೇಳಿ ಹೊರಟುಹೋಗೋಣ" ಎಂದು ಕೇಳುತ್ತಾಳೆ. ಪೂರ್ಣಾವತಾರಿಯಾದ ಶ್ರೀ ಕೃಷ್ಣನ ಲೀಲಾ ಪ್ರಸಂಗವು ಯಾರಿಗೆ ಬೇಡ? ಎಲ್ಲರೂ ಆಗಬಹುದೆನ್ನುತ್ತಾರೆ.—

(ಧಾಟಿ—ಕಾವಡಿಚಂದಿನಂತೆ)

ಮುಂಜಾನೆದ್ದು ನಾನೀಗ । ಆಕಳನಾದರೆ ಹೊಡೆದು ಬಂದೆ ॥
ಅಸ್ತಾಮಾನಾವಾಯಿತು । ಆಕಳು ಕರೆಯುವ ಹೊತ್ತಾಯಿತು ॥
ಆಕಳು ಕೊಡೋ ಕೃಷ್ಣ । ನಮ್ಮಾಕಳು ಕೊಡೋ ॥ ೧ ॥

ಆಕಳನಾದರೆ ಕಾಣಾಲಿಲ್ಲ । ಆಕೇ ನಮಗೇ ಹೇಳಾಲಿಲ್ಲ ॥
ಸೆರಗು ಹಿಡಿದೂ ನಿಲ್ಲಿಸಿದ್ರೀಗ । ಸಾವಿರ ಆಕಳ ತಂದು ಕೊಡುವೇ ॥
ಆಕಳು ಕಾಣೇ ನಾನಿಮ್ಮಾಕಳು ಕಾಣೇ ॥ ೨ ॥

ಸಣ್ಣಾ ರೋಮದ ಆಕಳು ಕಾಣೋ । ಸರದಾ ಮುತ್ತಿನ ಮಲಕೂ ಕಾಣೋ ॥
ಬೆನ್ನಲ್ಲಿ ಬಿಳುಪಿರುವುದು ಕಾಣೋ । ಬಾಲಾ ಬೀಸುತ ಬರುವುದು ಕಾಣೋ ॥
ಆಕಳು ಕೊಡೋ ಕೃಷ್ಣಾ ನಮ್ಮಾಕಳು ಕೊಡೋ ॥ ೩ ॥

ಹಳ್ಳದ್ದಂಡೆಲಿ ಮೇಯುತಿತ್ತು । ಕಳ್ಳೀ ಮರೆಯಲಿ ನಿಂತಿತ್ತು ॥
ಕರುವನ್ನಾದರು ಉಣಿಸೂತಿತ್ತು । ಮನೆಯ ದಾರಿಯ ಹಿಡಿಯುತಿತ್ತು ॥
ಆಕಳು ಕೊಡೋ ಕೃಷ್ಣಾ ನಮ್ಮಾಕಳು ಕೊಡೋ ॥ ೪ ॥

ಎಂಟೂ ಯೆಂಟೂ ದಿನಕೆ ರೊಕ್ಕ । ಯೆಣಿಸಿಕೊಂಡು ಹೋಗುತೀಯೆ ॥
ಗಂಟೂ ಕಳ್ಳೀ ಗೋವಿನ್ನಾ । ನೆಂಟಾರಲ್ಲಿ ಬಿಟ್ಟೊ ಬಂದ್ಯಾ ॥
ಆಕಳು ಕಾಣೇ ನಾನಿಮ್ಮಾಕಳು ಕಾಣೇ ॥ ೫ ॥

ಬೇಡಿದರಿಷ್ಟೂ ಒಲಿವೋರಿಲ್ಲ । ಕೇಳಿದರಿಷ್ಟೂ ಕೊಡುವೋರಿಲ್ಲ ॥
ನಿನ್ನ ಬಾಲನ ಕಳಿಸಿ ಕರೆಸೀಕೊ । ಇಲ್ಲ್ಯಾರನ ಬೆದರಿಸಬಂದೇನೇ ॥
ನಾಕಳು ಕಾಣೇ ನಾ ನಿಮ್ಮಾಕಳು ಕಾಣೇ ॥ ೬ ॥

ಅರಸಿಗಾದರೆ ಹೇಳೂತೇನೆ । ಅಲ್ಲಿಗೆ ನಿನ್ನ ಕರೆಸುತೇನೆ ॥
ಕದ್ದದ್ದುಂಟು ಮಾಡಿಸುತೇನೆ । ಕಪಟಾ ಬುದ್ಧಿ ಬಿಡಿಸುತೇನೆ ॥
ಆಕಳು ಕೊಡೋ ಕೃಷ್ಣಾ ನಮ್ಮಾಕಳು ಕೊಡೋ ॥ ೭ ॥

ಯಾವಾ ಅರಸಿಗೆ ಹೇಳೋತೀಯೆ । ಎಲ್ಲಿಗೆ ನನ್ನ ಕರೆಸೋತೀಯೆ ॥
ಬಾಯಾ ಮಾಡೀ ಕೊಲ್ಲಿಸುತೀಯಾ । ಮಾಯಾಗಾತೀ ಹೆಣ್ಣೇ ನೀನು ॥
ಆಕಳು ಕಾಣೇ ನಾ ನಿಮ್ಮಾಕಳು ಕಾಣೇ ॥ ೮ ॥

ಆಕಳು ತಂದು ಕೊಟ್ಟ್ಬಾರೀಗ । ಬೇಕಾದ್ದುಚ್ಚ್ಕಡವನ್ನೂ ಕೊಡುವೆ ॥
ತುಪ್ಪದ್ದೀಪಾ ಹಚ್ಚ್ಹೂವೇ । ಸಕ್ಕ್ಕಾರೆ ತಂದೂ ಹಂಚೂವೆ ॥
ಆಕಳು ಕೊಡೋ ಕೃಷ್ಣಾ ನಮ್ಮಾಕಳು ಕೊಡೋ ॥ ೯ ॥

ಆಕೇ ಹಂಕೇ ಹೊತ್ತೂಕೊಂಡೂ । ಆಕಳು ತಂದೂ ಮನೆಗೆ ಬಿಟ್ಟೂ ॥
ಜೋಕೇ ಎಂದೂ ಹೇಳೀ ನಡೆದ । ಪುರಂದರ ವಿಠಲಾ ರಾಯಾ ॥
ಆಕಳೂ ಬಂತೂ ಮನೆಗೆ ಆಕಳೂ ಬಂತೂ ॥ ೧೦ ॥

ಹಾಡನ್ನು ಕೇಳಿದವರೆಲ್ಲ ಅಂತರಂಗದಲ್ಲಿ ಒಮ್ಮೆ ಲೀಲಾ ಮಾನುಷ ವಿಗ್ರಹನಾದ ಆ ಸ್ವಾಮಿಯನ್ನೂ ಅವನ ಸರ್ವ ಪ್ರಿಯವಾದ ತುಂಟತನವನ್ನೂ ನೆನೆದು ಸಂತೋಷ ಭರಿತರಾಗಿ ಒಂದು ಗಳಿಗೆ ಮೈಮರೆತಿದ್ದಾರೆ. ಅವರಲ್ಲಿ ಯಾರೋ ಒಬ್ಬಳು—

ನಿಜವಮ್ಮಾ ! ಆಕಳೂ ಬಂತೂ ಮನೆಗೆ ಆಕಳು ಬಂತೂ ॥
ಕಟ್ಟಿಹಾಕದಿದ್ದರೆ ಒಳಗೆ ಎಲ್ಲಾವನ್ನೂ ತೀಂತು । ಎಲ್ಲಾ ತೀಂತು ॥

"ಅದರಿಂದ, ನಡೆಯಿರಿ ಮನೆಗೆ ಹೋಗೋಣ!" ಎನ್ನುತ್ತಾಳೆ.

ಎಲ್ಲರೂ ಕೇಳಿ ಯಥಾ ರುಚಿಯಾಗಿ ನಕ್ಕು, ದೀಪ ಹೊತ್ತಿಸುವ ಹೊತ್ತಾಯಿತೆಂದು ಹಣೆಗೆ ಕುಂಕುಮವಿಟ್ಟುಕೊಂಡು ಹೊರಡುತ್ತಾರೆ.

ನಮ್ಮ ಆಕೆಗೂ ಸಡಗರ: ಹಸು ಕರು ಮನೆಗೆ ಬಂದಿವೆ. ಅವುಗಳನ್ನು ಗೊತ್ತಿನಲ್ಲಿ ಕಟ್ಟಿ, ಮಡಿಯುಟ್ಟು, ದೇವರಿಗೆ ಸಂಜೆ ದೀವಿಗೆಯಿಟ್ಟು, ಒಕ್ಕಲಗಿತ್ತಿಯು ಒಗೆದು ತಂದಿರಿಸಿರುವ ಬಟ್ಟೆಗಳಿಗೆ ಮಡಿ ನೀರು ಹಾಕಿ ಹಿಂಡಿ ಒಣಗಿಹಾಕಿ ಬರುತ್ತಾಳೆ. ಆಟವಾಡಿ ದಣಿದು ಹಸಿದು ಬಂದಿರುವ ಮಕ್ಕಳು ಕೈ ಕಾಲು ತೊಳೆದುಕೊಂಡು ದೇವರಿಗೆ ಅಡ್ಡಬಿದ್ದು ತಾಯಿಯ ಹಾದಿಯನ್ನು ಕಾದಿದ್ದಾರೆ. ತಾಯಿಯೂ ಬಂದು ಮಕ್ಕಳಿಗೆ ಬಡಿಸುತ್ತಾಳೆ. ಮದುವೆಯ ಮನೆಯ ಹಾಗೆ ಸಂಭ್ರಮವಾಗಿ ಕೋಲಾಹಲವಾಗಿ (ಮನೆಯೊಡತಿಯು ಪ್ರಸನ್ನೆಯಾಗಿದ್ದರೆ ಮಾತ್ರ) ಮಕ್ಕಳು ಕೇಕೆ ಹಾಕಿಕೊಂಡು ಆನಂದದಿಂದ ಅಂಬಲಿಯೋ, ಪರಮಾನ್ನವೋ ಹೊಟ್ಟೆತುಂಬ ಉಂಡು ಏಳುತ್ತವೆ.

ತಾಯಿಯು ಮಗುವನ್ನು ಮತ್ತೆ ತೊಟ್ಟಿಲಿಗೆ ಹಾಕುತ್ತಾಳೆ. ಜೋಗುಳಗಳಿಗೆ ಆರಂಭವಾಗುತ್ತದೆ.—

೧೨. ಹೊಳ್ಳೊಳ್ಳ ಹಾಯೀೕೕೕೕ ಹಣ್ಣು ಮೆಣಸಿನ ಕಾಯೀೕೕೕೕ ॥ ಪ ॥
ನಿದ್ದೆಬಾರದ ಕಣ್ಗೆ ಮದ್ದ್ಯಾರೆ ಬಲ್ಲವರು । ಗದ್ದೇಲಿ ಬೆಳೆದ ಗರಗಾ ॥
ಗರಗಾದ ಸೊಪ್ಪನ್ನೆ ತಂದು । ಭದ್ರೆ ಕಾಡೀಗೆ ಮಾಡಿದಾಳು ॥ ೧ ॥

ಬೆಳ್ಳಿ ಬೆಳ್ಳೀ ಮುದ್ದು ಬೆಳ್ಳಿ ತಾವರೆ ಮುದ್ದು । ಹಣ್ಣುಳ್ಳ ಮರಕೆ ಗಿಣಿ ಮುದ್ದು ॥
ಗಿಣಿ ಮುದ್ದು ನಮ್ಮಯ್ಯ । ನಮ್ಮನೆಗೆ ಯೆಲ್ಲ ನೀ ಮುದ್ದು ॥ ೨ ॥

ಅತ್ತು ಕಾಡುವನಲ್ಲ ರಚ್ಚೆ ಮಾಡುವನಲ್ಲ । ಲಕ್ಷಣಾವಂತ ಸಿರಿವಂತ ॥
ಸಿರಿವಂತ ನಿನ್ನಂತ । ಮಕ್ಕಳಾಡಲಿ ಮನೆ ತುಂಬ ॥ ೩ ॥

(ಈ ಜಾತಿಯಲ್ಲಿ, ಮಾಡುತ್ತಿರುವ ಕೆಲಸಕ್ಕೆ ಸಂಬಂಧವೇ ಇಲ್ಲದ ವಿಷಯಾಂತರಗಳೂ ಬರುವುದುಂಟು.)

ಬೆಟ್ಟದಾ ತಿಮ್ಮಪ್ಪ ಬೇಲೂರು ಚೆನ್ನೀಗ । ನಾಗಮಂಗಲದ ನರಸಿಂಹ ।
ಇವರು ಮೂರೂ ಮಂದಿ । ಗೀರು ಗಂಧದಲಿ ಚೆಲುವಾರು ॥ ೪ ॥

ಸೂಳೀಗೆ ಸುತ್ತೋಲೆ ಮಡದೀಗೆ ಮುತ್ತೋಲೆ । ಮೆಚ್ಚಿ ಬಂದವಳಿಗೆ ಬಿಚ್ಚೋಲೆ ।
ಅಪ್ಪ ಅಣ್ಣಯ್ಯನ । ಪಟ್ಟದಾ ಹೆಂಡತಿಗೆ ಹರಳೋಲೆ ॥ ೫ ॥

* * * * *

ಜೋಗುಳದ ಸಾಹಿತ್ಯವು ಕನ್ನಡದಲ್ಲಿ ಅಪಾರವಾಗಿದೆ. ಇದು ನೋಡುವುದಕ್ಕೆ ತ್ರಿಪದಿಯ ಕಟ್ಟಿನಲ್ಲಿದ್ದರೂ, ಹಾಡುವಾಗ ಎರಡನೆಯ ಪಾದದಲ್ಲಿ ಅರೆಯಾಗಿ ಮುರಿದು ಅರ್ಧಕ್ಕೆ ನಿಲ್ಲಿಸಿಕೊಂಡಿದ್ದು, ಮತ್ತೆ ಆ ಮುರುಕಿನ ಉತ್ತರಾರ್ಧದಿಂದ ಎತ್ತಿ ಹಾಡುವುದರಿಂದ, ಒಂದು ಜಾತಿಯ ಚೌಪದಿಯು ಹಾಗಿದೆಯೆನ್ನಬಹುದು ; ಅಥವಾ, ಕಟ್ಟಿನಿಂದ ತ್ರಿಪದಿ ಹಾಡುವಾಗ ಚೌಪದಿಯೆಂದರೂ ಸಲ್ಲುವುದು.

ಹಾಡುವುದರಲ್ಲಿ ಈ ಜಾತಿಗೂ ಸಾಂಗತ್ಯಕ್ಕೂ ಇರುವ ವ್ಯತ್ಯಾಸವು ಗಮನಿಸಬೇಕಾದುದು.

(ಇಲ್ಲಿ ಕೊಟ್ಟಿರುವ ಐದು ಪದ್ಯಗಳೂ ಛಂದೋದೃಷ್ಟಿಯಿಂದ ಎಷ್ಟು ಅಸಮಾನವಾಗಿವೆ!

ಹಾಗೆಯೇ, ಈ ಜಾತಿಯಲ್ಲಿರುವ ವಿಷಯ ವೈವಿಧ್ಯವೂ ಲಕ್ಷಿಸಬೇಕಾದುದು. ವೈದ್ಯ, ಜೋಯಿಸ, ನೀತಿ, ಸಂಪ್ರದಾಯ, ನಂಬಿಕೆ ಮೊದಲಾದ ಸರ್ವ ವಿಷಯಗಳನ್ನೂ ಇಲ್ಲಿ ಕಾಣಬಹುದು. ಅಷ್ಟೇನು? ಸರ್ವಜ್ಞನ ವಚನಗಳಂತೆ ಇವೂ ಒಂದು ವಿಶ್ವಕೋಶವೆನ್ನಬಹುದು. 'ಗರತಿಯ ಹಾಡು' ಪ್ರಕಟವಾಗಿದೆಯಾದುದರಿಂದ ಈ ವಿಷಯದಲ್ಲಿ ನಾವು ಹೆಚ್ಚಿಗೆ ಹೇಳಬೇಕಾಗಿಲ್ಲ.

ಇದೇ ಹಾಡುಗಳು ಶೂದ್ರಾಣಿಯ ರಾಗಿ ಬೀಸುವ ಹಾಡುಗಳಾಗಿವೆ. ಅಲ್ಲಿ ಭಾಷೆಯೂ ಇನ್ನೂ ಒಂದು ಮೆಟ್ಟಿಲಿಳಿದು ಗ್ರಾಮ್ಯ ಮುದ್ರೆಯನ್ನು ಸಂಪೂರ್ಣವಾಗಿ ತಳೆದಿದೆ. ಆದರೂ, ಎರಡೂ ಒಂದೇ ಜಾತಿಯೆಂದು ಹೇಳಲು ನಾವು ಹಿಂದೆಗೆಯುವುದಿಲ್ಲ.)

ಈ ಜೋಗುಳಗಳಲ್ಲಿ 'ಲಾಲಿ' ಪದಗಳೂ 'ಜೋ ಜೋ' ಪದಗಳೂ ಉಂಟು. ಆದರೆ ಅವು ನೈಮಿತ್ತಿಕ ವರ್ಗಕ್ಕೆ ಸೇರಿದವು ಎಂದು ನಮ್ಮ ಅಭಿಪ್ರಾಯ. ಈ ಪದಗಳನ್ನು ಸಾಮಾನ್ಯವಾಗಿ ತೊಟ್ಟಿಲಿಡುವಾಗ 'ಗುಂಡಪ್ಪ'ನಿಗೇ ಹೇಳುವುದು. ಈ ಪದಗಳು ಮೇಲೆ ಹೇಳಿದ 'ಹೊಳ್ಳೊಳ್ಳ ಹಾಯೀ' ಪದಗಳಂತೆ ಸದ್ದು ಗದ್ದಲವಿಲ್ಲದ ಜಾತಿಯಲ್ಲವಾಗಿ, ತಟ್ಟಿ ನಿದ್ದೆಗೆಯ್ಯಿಸುವಂತಹ ಶಾಂತ ಕರ್ಮಕ್ಕೆ ಸರಿಹೋಗುವುದಿಲ್ಲವೆಂದು ಇವಕ್ಕೆ ಬಹಿಷ್ಕಾರ ಬಿದ್ದಿರಬಹುದು. ಮಕ್ಕಳು ಕೊಂಚ ಪ್ರಬುದ್ಧರಾದ ಮೇಲೆ, ಅರೆ ಮಾತು ಆಡುವುದು ಕಲಿತ ಮೇಲೆ, ಈ 'ಲಾಲಿ', 'ಜೋ ಜೋ'ಗಳನ್ನು ಬಹುವಾಗಿ ಮೆಚ್ಚುವರು.

ಜಾಣೆಯರಾದ ಹೆಂಗುಸರು ಎಂತಹ ಹಾಡನ್ನಾದರೂ ಹೇಳಿ ಮಕ್ಕಳನ್ನು ತಟ್ಟಿ ನಿದ್ದೆಗೆಯ್ಯಿಸಬಲ್ಲರು. ಅದರಿಂದ ನಾವಿಲ್ಲಿ ಮಾಡಿರುವ ಸಾಮಾನ್ಯ ವಿಭಾಗಕ್ಕೆ ಚ್ಯುತಿ ಬರುವುದಿಲ್ಲ.

## (ಆ) ನೈಮಿತ್ತಿಕ ವರ್ಗ

ಈ ಗುಂಪಿನಲ್ಲಿ, ವಾರದ ಹಾಡುಗಳು, ಆಶೀರ್ವಾದದ ಹಾಡುಗಳು, ಶಾಸ್ತ್ರದ ಹಾಡುಗಳು (ಉರುಟಣೆ, ಸುವ್ವಿ, ಚೆಟ್ಟು, ಎಣ್ಣೆಯೊತ್ತುವುದು, ಬಳೆ ತೊಡಿಸುವುದು, ಆರತಿ), ಬೀಗರ ಹಾಡುಗಳು—ಇವೆಲ್ಲವೂ ಬರುವುವು. ಇದರಲ್ಲಿ ಕೊನೆಯದು, ಗಂಡುಸರ ಹಾಡುಗಳಲ್ಲಿ ಬರುವ 'ಏಸೋದದ ಪದ'ಗಳೆಂಬ ಗುಂಪಿಗೆ ಸೇರಿದುದು; ಉಳಿದವು ಅರ್ಥವಾದಗಳ ಗುಂಪಿಗೆ ಸೇರಿದವು. ಶಾಸ್ತ್ರದ ಹಾಡುಗಳು ಅಲ್ಲಿ ನಡೆಯುವ ಕ್ರಿಯೆಯನ್ನು ಬಣ್ಣಿಸುವವು; ಆಶೀರ್ವಾದಗಳು ಮಂತ್ರ ಸ್ಥಾನೀಯಗಳಾದ ಹರಕೆಗಳು. ಇವಕ್ಕೆಲ್ಲ ಒಂದೊಂದು ಉದಾಹರಣೆಯನ್ನು ಕೊಟ್ಟು ಮುಂದಕ್ಕೆ ಹೋಗೋಣ.—

### (೧) ಶಾಸ್ತ್ರದ ಹಾಡುಗಳು

೧೩. ಉರಟಣೆ ಹಾಡು.—

ಇದರಲ್ಲಿ, 'ನಲುಗು' ಇಡುವಾಗ ಒಂದು, ಗಂಧ ಪುಷ್ಪ ತಾಂಬೂಲಗಳನ್ನು ಒಪ್ಪಿಸುವಾಗ ಒಂದೊಂದು, ಆರತಿಗೊಂದು—ಹೀಗೆ ಹಲವು ಹಾಡುಗಳನ್ನು ಹೇಳುವುದುಂಟು. ಗ್ರಂಥ ವಿಸ್ತರ ಭಯದಿಂದ ನಾವು ಒಂದರಲ್ಲಿಯೇ ತೃಪ್ತರಾಗೋಣ.—

ಭೂಪಾಳಿ॥ ಉರಟಾಣೆಗೇಳೊ ಹರಿಯೆ । ಉರಗ ಶಯನ ದೊರೆಯೆ ॥ ಪ ॥
ನಂದ ಗೋಪಿಕುಮಾರ । ನತ ಜಗದುದ್ಧಾರ ॥ ಅ ॥

ನಂದ ನಂದನ ಸಿಂಧು ಶಯನ । ನೀ ಬಾರೈ ।
ಬಂಧು ರತುನ ಮಂಟಪದೊಳು ಮುದದಿಂದಲಿ ॥ ೧ ॥

### ೧೪. ಚೆಟ್ಟು ಬಡಿಯುವ ಹಾಡು.—

ಪಂಕಜ ಗಂಧಿನಿಯರು । ಕುಂಕುಮವ ಹದ ಮಾಡಿ ॥
ಶಂಕರನ ಪಟ್ಟದರಸಿಯನು ।
ಅರಸಿಯನು ಎಬ್ಬಿಸಿ । ಕುಂಕುಮದ ಚೆಟ್ಟ ಬಡಿದಾರು ॥ ಶೋಭಾನೆ ॥ ॥ ೧ ॥

### ೧೫. ಸುವ್ವಿ ಪದಗಳು.—

ಸುವ್ವಿ ರಾಮಚಂದ್ರ ಸುವ್ವಿ । ಸುವ್ವಿ ರಾಮಭದ್ರ ಸುವ್ವಿ ॥
ಸುವ್ವಿ ರಾ-ಮಾ-ಭಿರಾಮ ಸುವ್ವಲಾಲೆ ॥ ಪ ॥

ಜಾನಕೀಯ ವಿವಹವೆಂದು । ಮಾನಿನಿಯರು ಸೆರೆದು ಮುದದಿ ।
ಸಾನುರಾಗದಿಂದ ಮಧುರ । ಗಾನ ಮಾಡುತ ॥
ಪೊಳೆವ ಚಂದ್ರಕಾಂತಿ ಧವಳ ಶಿಲೆಯ ಒರಳಿನಲ್ಲಿ ರತುನ ।
ಗಳನು ಹಾಕಿ ಹರುಷದಿಂದ ನಳಿನಮುಖಿಯರು ॥ ೧ ॥

### ೧೬. ಮಡಲು ತುಂಬುವುದು.—

ಸಿದ್ಧಿ ವಿನಾಯಕನ ಪಾದ ಪದ್ಮಕ್ಕೆರಗಿ ।
ಮುದ್ದು ಶಾರದೇಯ ಭಜಿಸಿ ಸದ್ಗುರುವಿಗೆ ವಂದಿಸಿ ।
ಮುಕ್ತಿ ಕಾಂತೆಯ ಮಡಿಲ ತುಂಬುವ ಪದನ ।
ಪದ್ಧತಿಯ-ನು-ಕೇಳಿ ಜನರೆಲ್ಲ ॥ ಶೋಭಾನೆ ॥

### ೧೭. ಎಣ್ಣೆಯೊತ್ತುವುದು.—

ಎಣ್ಣೆಯ ನೊತ್ತಿದರು । ಯದು ಕುಲ ತಿಲಕಗೆ ॥ ಪ ॥
ದಶರಥ ಸುತನಿಗೆ । ಧರ್ಮ ಪರಿಪಾಲನಿಗೆ ।
ನಿರ್ಮಲ ರೂಪ ಶ್ರೀ । ರಾಮಚಂದ್ರಗೆ ॥ ಶೋಭಾನೆ ॥ ॥ ೧ ॥

### ೧೮. ಆರತಿಯೆತ್ತುವುದು.—

ಮಧುರೇಲಿ ಪುಟ್ಟಿ ಪಳ್ಳೀಗೆ ನಡೆತಂದು ।
ಒದೆದು ಪೂತನಿಯ ಅಸುವನೆ ಹೀರಿ ಕೊಂದೆ ।
ಮುದದಿಂದಲಸುರರ ಶಿರವ ಚೆಂಡಾಡಿ ।
ಅವನ ಶಿರವ ಚೆಂಡಾಡಿ ।

ಚದುರಿಂದ ಗೋವಕ್ಕಳೊಡನಾಡಿ ಬೆಳೆದೆ ।
ಹದವರಿತಂಘ್ರಿಯ ಪದುಳದಿ ನೆನೆವರ ।
ಹೃದಯದಿ ನೆಲಸಿದ ಬುಧ ಜನ ಪ್ರಿಯನಿಗೆ ।
ಪದುಮಾದಾರಾತೀಯ ಬೆ-ಳ-ಗೀ-ರೆ ॥ ಶೋಭಾನೆ ॥

## (೨) ಆಶೀರ್ವಾದ

೧೯. ಲೇಸಾಗಿ ಜನನಿ ಬಸುರಲಿ ಬಂದು । ಸಾಸೀರ ಬಾಲ ತೊಡಿಗೆನೆ ತೊಟ್ಟು ।
ದೇಶವನಾಳುವ ಪತಿಯ ಕೈ ಹಿಡಿದು ಹೊಸ ಕೂಸು ತಂಗಮ್ಮ ।
ನೀ ಸುಖಿಯಾಗಿರು ಎಂದು ಅಹಲ್ಯಾ ದೇವಿ ಹರಸೀದಳು ॥ ೧ ॥

ಒಡನೆ ಹುಟ್ಟಿದವರ ಒಡನಾಡು । ನೀ । ಹೊಕ್ಕ ಮನೆಗೆ ಹೆಸರನೆ ನಡೆಸು ।
ಹುಟ್ಟಿದ ಮನೆಗೆ ಮಾಣಿಕ್ಯವಾಗು । ಅಷ್ಟೈಶ್ವರ್ಯವು ಪುತ್ರ ಸಂತಾನವು ।
ಪಡೆದು ಸಾವಿರ ಕಾಲ ಮುತ್ತೈದೆಯಾಗಿ ನೀ ಬಾಳೆಂದು ಹರಸೀದರೂ ॥
॥ ಶೋಭಾನೆ ॥ ॥ ೨ ॥

## (೩) ವಾರದ ಹಾಡುಗಳು

ಒಂದೊಂದು ವಾರಕ್ಕೆ ಒಂದೊಂದು ಹಾಡು ಇದೆ. ಆದರೂ, ವ್ಯಾಪ್ತಿಯ ದೃಷ್ಟಿಯಿಂದ ಮಂಗಳಗೌರಿಯ ಹಾಡು ಹೆಚ್ಚೆಂದು ಅದನ್ನೇ ಇಲ್ಲಿ ಉದಾಹರಣೆಯಾಗಿ ಕೊಡುವೆವು. ಇದು ಒಂದು ವ್ರತದ ಕಥೆ. ವಾರದ ಹಾಡುಗಳೆಲ್ಲ ಅಷ್ಟೇ.

೨೦. ಪರಮ ಸಂತೋಷದಲಿ ಪತಿಯ ಪಾದಕ್ಕೆರಗಿ । ವರದ ಗಣಪತಿಗೆ ವಂದನೆಯ ಮಾಡಿ ॥
ಹರನರಸಿ ಮಂಗಳಾ ಗೌರಿ ದೇವಿಯ ಕಥೆಯ । ಒರೆವೆ ಬಲ್ಲಂಥ ಸಜ್ಜನರು ಕೇಳಿ ॥ ೧ ॥

ಜೂಜಾಡಿ ಪಾಂಡವರು ವನಕ್ಕೆ ಹೋದಾಗ, ಅವರನ್ನು ನೋಡಲು ಕೃಷ್ಣನು ಅಲ್ಲಿಗೆ ಹೋದನು. ಅವರಿಗೆ ಮತ್ತೆ ರಾಜ್ಯ ಲಾಭವಾಗಲೆಂದು ಈ ವ್ರತವನ್ನು ಕೃಷ್ಣನು ಅವರಿಗೆ ಉಪದೇಶಿಸಿದನು.

ಯಾರು ಮಾಡಿದರು ಈ ವ್ರತದ ಮಹಿಮೆಗಳೇನು ।
ಏನು ಫಲವೆಂದು ದ್ರೌಪದಿ ಕೇಳಲು ।
ನಾನು ಹೇಳುವೆ ಕೇಳು ಮುನ್ನ ಕರ್ನಾಟ ದೇಶದೊಳಗೊಬ್ಬ ಧೊರೆಯಿರುತ್ತಿದ್ದನು ॥ ೭ ॥

ಆ ಅರಸನ ಹೆಂಡತಿ ಕನಕಮಂಜುಳೆಯು ಒಂದು ದಿನ ಭಿಕ್ಷುಕ ರೂಪಿನಲ್ಲಿ ಬಂದ ಹರನಿಗೆ ಭಿಕ್ಷವನ್ನು ಇಕ್ಕಲು ಹೋದಳು. ಅವನು ಅದನ್ನು ಚೆಲ್ಲಿ ಹೊರಟು ಹೋದನು. ಮರು ದಿನವೂ ಆ ಭಿಕ್ಷುಕನು ಬಂದನು. ಆ ದಿನವೂ ಹಾಗೆಯೇ ಆಗಲು, ದಂಪತಿಗಳು ಕಾರಣವೇನೆಂದು ವಿಚಾರಿಸಿ, ತಮ್ಮ ಅಪುತ್ರತ್ವವೇ ಕಾರಣವೆಂದು ತಿಳಿದು ಆ ಪಾಪವನ್ನು ಕಳೆದುಕೊಳ್ಳಲು ಅವನನ್ನೇ ಮರೆಹೊಕ್ಕರು. ಅವನು ಹದಿನಾರು ವರ್ಷ ಮಾತ್ರ ಬದುಕುವ ಮಗನನ್ನು ಕೊಟ್ಟನು.

ಆ ಹುಡುಗನಿಗೆ ಹದಿನಾರನೆಯ ವರ್ಷವು ಸಮೀಪಿಸಲು, ಅವನನ್ನು ಸೋದರ ಮಾವನ ಜೊತೆಯಲ್ಲಿ ಅಪಮೃತ್ಯು ನಿವಾರಣೆಯಾಗಲೆಂದು ಕಾಶಿಗೆ ಕಳುಹಿಸಿದರು. ದಾರಿಯಲ್ಲಿ ಅವರು ಗೊಂಡಾರಣ್ಯಪುರದರಸು ಮಂಡೋರಾಯನ ಉದ್ಯಾನದಲ್ಲಿ ನಿಂತರು. ಅಲ್ಲಿಗೆ ರಾಯನ ಮಗಳು ಸಂಗಾತಿಯರೊಡನೆ ಹೂವಿಗಾಗಿ ಬಂದಳು. ಅವರಲ್ಲಿ—

......ಒಬ್ಬಳು ಕೋಪಿಸಿ ।
ರಾಜ್ಯಾಧಿಪತಿಯ ಮಗಳೆಂದು ನೋಡದೆ ಅವಳು ।
ಬಹಳ ಕಷ್ಟದ ಮಾತು ನುಡಿದಳಾಗ । ॥ ೨೩ ॥

ನುಡಿದ ಮಾತನು ಕೇಳಿ ನಗುತ ಮನದಲ್ಲಿ ।
ಮಂಗಳಾ ಗೌರಿಯ ದಯವುಂಟು ಯೆನಗೆ ॥

ಮಂದ ಮತಿ ನೀ ನುಡಿದರೇನಾಯಿತೇ ಯೆನಗೆ ।
ಬಂದ ಮೃತ್ಯುಗಳ ಜೈಸುವೆನೆಂದಳು ॥ ೨೪ ॥

ಈ ಮಾತುಗಳನ್ನು ಕೇಳಿ ಅರಸುಮಗನು, "ಮಾವಯ್ಯಾ ! ದೇವರ ದಯವಿದ್ದರೆ ಈ ಹೆಣ್ಣನ್ನು ಮದುವೆಯಾಗಬೇಕು" ಎಂದನು. ಇವರು ಇನ್ನೂ ಅಲ್ಲಿರುವಾಗಲೇ ಅಲ್ಲಿಗೆ ದಿಬ್ಬಣ ಬಂದಿತು. ಅವರು ಈ ಹುಡುಗನನ್ನು ನೋಡಿ, "ಇವನನ್ನು ಒಂದು ಗಳಿಗೆ ಸಾಲ ಕೊಡುವಿರಾ ?" ಎಂದು ಕೇಳಿದರು. ಆದಕ್ಕೆ ಹುಡುಗನ ಮಾವನು ನಕ್ಕು—

ಹೊನ್ನು ಹಣ ಬೆಳ್ಳಿ ಭಂಗಾರ ಎರವುಂಟು ।
ಕನ್ನಿಕೆಗೆ ವರನನು ಎರವ ಕೇಳುವರ ।
ಕಣ್ಣಲ್ಲಿ ಕಾಣೆನು ॥

ಎಂದನು, ಆದರೂ—

ಯಾರ ಪುಣ್ಯದಲಿ ಬದುಕಿದರೆ ಸಾಕು ಮದುವೆ । ಆಗು ಹೋಗು ॥

ಎಂದು ಅಳಿಯನನ್ನು ಕಳುಹಿಸಿದನು. ಮದುವೆಯಾದ ಮೇಲೆ ವಧೂವರರಿಬ್ಬರೂ

ಮಂಗಳಾ ಗೌರಿಯ ಮುಂದೆ । ಸಂಗಾತ ಉಂಡು ಮಲಗಿರೆ ।
ಚಂದ್ರಶೇಖರರಾಯ (ಅರಸು ಮಗ) ಹಸಿದೆನೆಂದು ಹೆಂಡತಿಯ ಕೂಡೆ ಹೇಳಿದ ವಿನಯದಿ ॥

ಆಗ ಅವಳು ಬಟ್ಟಲಲ್ಲಿ ಲಡ್ಡಿಗೆ ತುಪ್ಪ ತಂದು ಕೊಟ್ಟಳು. ಊಟ ಮಾಡುವಾಗ ಅವನ ಉಂಗುರವು ಬಟ್ಟಲೊಳಗೆ ಬಿದ್ದಿತು. ಅವಳು ಅದನ್ನು ತೆಗೆದುಕೊಂಡು ದೇವರ ಮನೆಯಲ್ಲಿ ಇಟ್ಟು ಮಲಗಿದಳು.

ಇಬ್ಬರೂ ಮಲಗಿರುವಾಗ ಘಟಸರ್ಪವೊಂದು ಮಂಚದ ಬಳಿಗೆ ಬಂದಿತು. ರಾಜಪುತ್ರಿಯು ಮಂಗಳಗೌರಿಯ ಪ್ರಸಾದವನ್ನು ಅದರ ಮೇಲೆ ಚೆಲ್ಲಿಯಲು, "ಅದರಾಯುಷ್ಯವು ಕ್ಷೀಣವಾಯಿತು"; ಅವಳ ಗಂಡನು ಚಿರಾಯುವಾದನು. ಅವಳು ಆ ಹಾವನ್ನು ಒಂದು ಕಲಶಕ್ಕೆ ಹಾಕಿ ಮುಚ್ಚಿಟ್ಟು ಮಲಗಿಕೊಂಡಳು. ರಾಜಕುಮಾರನು ಉದಯಕ್ಕೆ ಮುಂಚೆ ಗುಟ್ಟಾಗಿ ಎದ್ದು ಮಾವನೊಡನೆ ಕಾಶಿಗೆ ಹೊರಟು ಹೋದನು.

ಮರು ದಿನ ದಿಬ್ಬಣದವರು ಕೋಷ್ಟ ಹತ್ತಿದ ತಮ್ಮ ವರನನ್ನು ತಂದು ಹಸೆಯ ಮೇಲೆ ಕುಳ್ಳಿರಿಸಲು, ರಾಜಪುತ್ರಿಯು ಮೋಸವನ್ನರಿತು ಧಿಕ್ಕರಿಸಿದಳು. ದಿಬ್ಬಣದವರು

ಮಾರು ಮಾತಾಡದೆ ಹಿಂದಿರುಗಿದರು. ಅವಳು ತಂದೆಯನ್ನೊಪ್ಪಿಸಿ ಒಂದು ಅನ್ನ ಸತ್ರವನ್ನು ಸ್ಥಾಪಿಸಿ, ಅಲ್ಲಿಗೆ ಊಟಕ್ಕೆ ಬಂದವರಿಗೆಲ್ಲ ತಾನೇ ವೀಳೆಯವನ್ನು ಕೊಡುತ್ತಿದ್ದಳು.

ಇತ್ತ, ಭಾಗೀರಥಿಗೆ ಹೋದವರು ಆರೇಳು ತಿಂಗಳಾದ ಮೇಲೆ ಕಾವಡಿಯೊಡನೆ ತಿರುಗಿದರು. ರಾಜಪುತ್ರಿಯು ಅವರನ್ನು ಗುರುತಿಸಿ ಅರಮನೆಗೆ ಕರೆತಂದಳು. ಎಲ್ಲರೂ ಗುರುತೇನೆಂದು ಕೇಳಲು, ಬಟ್ಟಲಲ್ಲಿ ಬಿದ್ದ ಉಂಗುರವನ್ನು ತಂದು ತೋರಿಸಿ ನಂಬಿಸಿದಳು. ಆ ದಿನದ ರಾತ್ರಿ ಕಚ್ಚಲು ಬಂದಿದ್ದ ಘಟಸರ್ಪವು ಇಟ್ಟಿದ್ದ ಕಲಶದಲ್ಲಿಯೇ ಕಂಠಾಮಾಲೆಯಾಗಿದ್ದಿತು. ಅದನ್ನೇ ಕೊರಳಿಗೆ ಹಾಕಿ ಅವಳು ಚಂದ್ರಶೇಖರನನ್ನು ವರಿಸಿದಳು.

ಕಾಲ ಕ್ರಮದಲ್ಲಿ ಮಾವನ ಅಪ್ಪಣೆ ಪಡೆದು ಚಂದ್ರಶೇಖರನು ಹೆಂಡತಿಯೊಡನೆ ಬಂದು ಪುರವನ್ನು ಸೇರಿ ಎಲ್ಲರಿಗೂ ಸಂತೋಷವನ್ನು ಉಂಟುಮಾಡಿದನು. ಅದರಿಂದ—

ಸೃಷ್ಟಿಗೀಶ್ವರನರಸಿ ಗೌರಿಯನೆ ಪೂಜಿಸಿ । ಮುತ್ತೈದೆತನವನು ಪಡೆದಳು ॥
ಅಷ್ಟ ಐಶ್ವರ್ಯವನು ಪುತ್ರ ಸಂತಾನವನು । ಕೊಟ್ಟು ರಕ್ಷಿಪಳು ಮಂಗಳಾ ಗೌರಿಯು ॥

(ಈ ಕಥೆಯು ಎಷ್ಟು ಸುಂದರವಾದುದು! ಸದಾರಮೆಯ ನಾಟಕದ ಉತ್ತರ ಭಾಗಕ್ಕೆ ಇದರಿಂದ ಎಷ್ಟು ಉಪಕಾರವಾಗಿದೆ!)

## (೪) ಬೀಗರ ಹಾಡುಗಳು

ಬೀಗರ ಹಾಡುಗಳು ಎಲ್ಲರಿಗೂ ಪರಿಚಿತವಾದುವು. ಇವು ಗಂಡುಸರ ಹಾಡುಗಳಲ್ಲಿ ಬರುವ ಸವಾಲುಗಳಂತಿದ್ದು ಎದುರುಕಡೆಯುವರ ದೋಷವನ್ನು—ವಾಸ್ತವ್ಯವೋ ಕಲ್ಪಿತವೋ ಎಂಬ ಯೋಚನೆಯಿಲ್ಲದೆ ವಾಚಾಮಗೋಚರವಾಗಿ—ಉದ್ಘಾಟಿಸಿ, ಅಲ್ಲಸಲ್ಲದ ರೀತಿಯಲ್ಲಿ ನಿಂದಾ ಪ್ರಧಾನವಾಗಿ ಪ್ರವಹಿಸುವುವು. ಒಂದು ಮದುವೆಯು ಗೊತ್ತಾದ ಕೂಡಲೆ ವಧೂವರರ ಕಡೆಯುವರು ತಮ್ಮ ತಮ್ಮ "ಬೀಗರ ಹಾಡುಗಳ" ಭಂಡಾರವನ್ನು ಹೆಚ್ಚಿಸಿಕೊಳ್ಳುವ ಪ್ರಯತ್ನವು ರಮಾರಮಿಯಾಗಿ ನಡೆಯುತ್ತಿದ್ದುದು ಸರ್ವರಿಗೂ ವಿದಿತವಾದ ಅಂಶ. ಈಗ ಈ ವಿನೋದವು ಮದುವೆಗಳಲ್ಲಿ—ಊಟ ಮಾಡುವಾಗ ಶ್ಲೋಕ ಹೇಳುವ ಪದ್ಧತಿಯಂತೆ—ಶಿಥಿಲವಾಗುತ್ತಿದೆ.

ಹೊಸದಾಗಿ ಸಂಬಂಧಿಗಳಾದವರು ಸರಸವಾಗಿ ನಗು ನಗುತ್ತ, ಬಯ್ದಾಡುವವರೆಗೂ ಇಳಿದು, ಬಾಂಧವ್ಯವನ್ನು ನಗೆಯ ಸಿಮೆಂಟಿನಿಂದ ಭದ್ರಪಡಿಸಿಕೊಳ್ಳಲೆಂದು ಈ ಸಂಪ್ರದಾಯವು ಬಂದಿತು ಎಂದು ಒಪ್ಪುವುದಾದರೆ, ಅಂತರ್ಧಾನವಾಗದಂತೆ ಇದನ್ನು ಕಾಪಾಡಿಕೊಳ್ಳುವುದು ಒಳ್ಳೆಯದು.

ಇವಕ್ಕೆ ಉದಾಹರಣೆಗಳು ಬೇಕಾಗಿಲ್ಲ.

## ೨. ಶೂದ್ರಾಣಿಯ ಹಾಡುಗಳು

ಈ ಭಾಗದಲ್ಲಿ ಈಗಾಗಲೇ ಕೊಂಚ ಕೊಂಚವಾಗಿ ಕೆಲಸ ನಡೆದಿದೆ[1]; ಸಂಗ್ರಹವೂ ಇದ್ದುದರಲ್ಲಿ ಚೆನ್ನಾಗಿ ನಡೆದಿದೆ.[2] ಆದರಿಂದ ವಿಸಿಗವುಕವಾದ ಕೆಲವು ಹಾಡುಗಳನ್ನು ಮಾತ್ರ ಉದಾಹರಿಸಿ ಮುಂದೆ ನಡೆಯುವೆವು.

ಬ್ರಾಹ್ಮಣಿಯ ದಿನಚರ್ಯೆಯಲ್ಲಿ ಹಾಡುಗಳು ಬೆರೆದುಹೋಗಿರುವಷ್ಟು ಶೂದ್ರಾಣಿಯ ದಿನಚರ್ಯೆಯಲ್ಲಿ ಬೆರೆದಿಲ್ಲ: ಇವಳು ಅವಳಷ್ಟು ಹಾಡುಗಳನ್ನು ಹಾಡುವುದಿಲ್ಲ ಎಂದು ತೋರುತ್ತದೆ. ಬೆಳಗಿನ ಜಾವದಲ್ಲಿ ಮುಂಬೆಳಕಿಗೆ ಮುಂದೆ ಬ್ರಾಹ್ಮಣಿಯ ಉದಯರಾಗ ಸ್ಥಾನದಲ್ಲಿ ರಾಗಿಬೀಸುವ ಹಾಡುಗಳು ಬರುತ್ತವೆ. ಅಲ್ಲಿಂದ ಮುಂದೆ ಮನೆಯಲ್ಲಿ ಮತ್ತೆ ಯಾವ ಹಾಡೂ ಕೇಳಿಬರುವುದಿಲ್ಲವೆಂದರೆ ತಪ್ಪಿಲ್ಲ. ಅವಕಾಶವಾದಾಗ, ಹಾಡು ಹೇಳುವವರು (ತಿರುಪದವರು ಸಾಮಾನ್ಯವಾಗಿ) ದೊರೆತಾಗ, ಶೂದ್ರಾಣಿಯು ಅವಶ್ಯವಾಗಿ ಕೇಳುವುದುಂಟು; ದವಸ ಧಾನ್ಯಗಳನ್ನು ಮೊರ ಮೊರವಾಗಿ ಕೊಟ್ಟು ಹಾಡು ಹೇಳಿದವರನ್ನು ಸತ್ಕರಿಸುವುದುಂಟು. ಆದರೆ ತಾನೇ ಹಾಡುಗಳನ್ನು ಗೊಣಗಿಕೊಳ್ಳುತ್ತ ಮನೆಗೆಲಸ ಮುಂತಾದವುಗಳನ್ನು ಮಾಡಿಕೊಂಡುಹೋಗುವುದು ಅಪರೂಪ.

ನೈಮಿತ್ತಿಕವಾಗಿ, ಕುಲದೇವರ ಹಬ್ಬಗಳು, ಮದುವೆ ಮುಂತಾದ ಶುಭ ಕಾರ್ಯಗಳು, ನಾಟಿ ಮೊದಲಾದ ಹೊಲ ಗದ್ದೆಗಳಲ್ಲಿ ಮಾಡುವ ಕಾರ್ಯಗಳು—ಇಂತಹ ಸಂದರ್ಭಗಳಲ್ಲಿ ಹಾಡುಗಳಿವೆ. ಆದರೂ ಬ್ರಾಹ್ಮಣಿಗೆ ಇರುವ "ಹಾಡು ಬರದಿದ್ದರೆ ಕುಂದು" ಎಂಬ ಭಾವವು ಶೂದ್ರಾಣಿಯಲ್ಲಿಲ್ಲವೆಂದುಕೊಳ್ಳಬಹುದು.

ಹಿಂದೆ ನಾವು ಸೂಚಿಸಿದಂತೆ ರಾಗಿಬೀಸುವ ಪದಗಳೂ ಬ್ರಾಹ್ಮಣಿಯ ಜೋಗುಳದ ಪದಗಳೂ ಒಂದೇ ಜಾತಿಯವು. ಹಬ್ಬಗಳಲ್ಲಿಯೂ ಶುಭ ಕಾರ್ಯಗಳಲ್ಲಿಯೂ ಬರುವ ಹಾಡುಗಳು ಸಾಮಾನ್ಯವಾಗಿ ಅದೇ ಜಾತಿಯ ಬ್ರಾಹ್ಮಣಿಯ ಹಾಡುಗಳಂತೆಯೇ ಇವೆ. ವೈಶಿಷ್ಟ್ಯವು ಚೆನ್ನಾಗಿ ಕಾಣಿಸುವುದು ನಾಟಿ ಮುಂತಾದ ಸಂದರ್ಭಗಳಲ್ಲಿ ಹೇಳುವ ಹಾಡುಗಳಲ್ಲಿ. ಇಲ್ಲಿಯೂ ಹಿಂದೆ ಹೇಳಿರುವಂತೆ ರಾಗಕ್ಕಿರುವ

---

1. 'ಹಳ್ಳಿಗರ ಹಾಡುಗಳು' ಎಂಬ ಹೆಸರಿನಿಂದ ಶ್ರೀ॥ ಬೆಟಗೇರಿಯವರು ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆ (ಸಂಪುಟ ೧೫, ಪುಟ ೪೫—೭೫) ಯಲ್ಲಿ ಒಂದು ವಿಸ್ತಾರವಾದ ಲೇಖನವನ್ನು ಬರೆದಿದ್ದಾರೆ. 'ಜೋಗೀ ಹಾಡಿನ ವಿಚಾರ'ವಾಗಿ ಶ್ರೀ॥ ಮಾ. ವೆಂಕಟೇಶ ಐಯಂಗಾರ್ಯರವರೂ ಅದೇ ಪತ್ರಿಕೆಯಲ್ಲಿ (ಸಂಪುಟ ೯) ಬರೆದಿದ್ದಾರೆ. ಈ ವಿಷಯವಾಗಿ ಶ್ರೀ. ಪ್ರ. ನರೇಗಲ್ಲರವರು ಕರ್ನಾಟಕ ಕಾಲೇಜ ಪತ್ರಿಕೆಯಲ್ಲಿ "ವಾಸ್ತವ ಸಾಹಿತ್ಯ" ಎಂಬ ಒಂದು ಲೇಖನವನ್ನು ಬರೆದಿದ್ದಾರೆ.

2. "ಗರತಿಯ ಹಾಡು" ಎಂಬ ಸಂಗ್ರಹವು ಜಯಕರ್ನಾಟಕ ಗ್ರಂಥಮಾಲೆಯ ಲ್ಲಿ ಹೊರಬಿದ್ದಿದೆ; "ಹುಟ್ಟಿದ ಹಳ್ಳಿ—ಹಳ್ಳಿಯ ಹಾಡು" ಎಂಬುದು ಪುಸ್ತಕರೂಪದಲ್ಲಿ ಪ್ರಕಟವಾಗಿದೆ. ತಿಂಗಳು ತಿಂಗಳಲ್ಲಿಯೂ ಜಯಕರ್ನಾಟಕ, ಮೊದಲಾದ ಮಾಸಪತ್ರಿಕೆಗಳಲ್ಲಿಯೂ ಸಂಗ್ರಹಗಳು ಬರುತ್ತಿವೆ.

ಪ್ರಾಧಾನ್ಯವು ತಾಳಕ್ಕಿಲ್ಲ. ಇಲ್ಲಿ ರಾಗವೂ ಪಾಮರ ಸಹಜವಾದ ಪ್ರಾಕೃತ ರೀತಿಯಲ್ಲಿಯೇ ಇರುತ್ತದೆ.

### (ಅ) ನಿತ್ಯವರ್ಗ—ರಾಗಿ ಬೀಸುವ ಹಾಡು[3]

೨೧. ಕುಟ್ಟ ಬೀಸುವ ಹಾಡು ಯಾವಾಕಿ ಕಲಿಸ್ಯಾಳ ।
ಕೃಷ್ಣನ ತಂಗಿ ಸು-ಭದ್ರಿ ಕಲಿಸ್ಯಾಳ ।
ಕೃಷ್ಣನ ಮೇಲೆ ಪದಗೋಳ ॥

೨೨. ಆಕಾಶದಡವ್ಯಾಗ ಧೂಪದ ಹೊಗೆಯೆದ್ದು
ಆಯ್ತು ಮಲ್ಲಯನ ಶಿವಪೂಜ । ಆಗಾಗ
ಆಕಾಶದ ಘಂಟೆ ಘಳಲೆಂದು ॥

೨೩. ಕಾಸೀಗೆ ಹೋಗಲಕ ಐಸೊಂದು ದಿನ ಬೇಕ
ತಾಸು ಹೊತ್ತಿನ ಹಾದಿ ತವರೂರ ಮನಿಯಾಗ
ಕಾಸಿ ಕುಂತಾಳ ಹಡೆದವ್ವ ॥

೨೪. ಎಂದೂ-ಬಾರದ ಸೋಮಿ ಇಂದೇನು ದಯವಾದ್ರಿ ।
ಬಂದೇ ಕಾಣ್ಮಾಗ್ಯೇ ಬಡಸ್ತಾನ ನೋಡಿ ।
ಬಂದೇ ಕಾಣ್ಮಾಗ್ಯೇ ಬಡಸ್ತಾನಾ ನೋಡ್ಲಾರ್ದೆ ।
ಬಂದೇವು ನಿಮ್ಮಾರ ಮನೆಗೆ ॥

೨೫. ಬಂದಾ ಗುರ್ವೀಗೆ ಗಿಂಡಿಲಗ್ಗಣಿ ಕೊಟ್ಟು
ಚಿನ್ನಾದಾ ಪಾತ್ರಾರೆ ಬೆಳಗೀರ್ಸೀ ॥
ಚಿನ್ನಾದಾ ಪಾತ್ರಾರೆ ಚೆನ್ನಾಗಿ ಬೆಳಗಿರ್ಸೀ
ಬಿನ್ನಹಕೆ ನಮ್ಮೀಗೇ ದಯವಾಗೀ ॥

೨೬. ರಾಗೀಯು ಮುಗಿದಾವು ರಾಜಾಣಾ ಹೆಚ್ಚಾವು
ನಾನಿಡಿದ ಕೆಲಸಾ ವದಗ್ಯಾವೂ ।
ನಾನಿಡಿದ ಕೆಲಸಾ ವದಗ್ಯಾವೂ ರಾಗೀಕಲ್ಲೀ
ನಾ ಕೂಗಿ ಬಿಡುತೀನಿ ಬಲದೋಳಾ ॥

ನಾನಿನ್ನ ಸೋಲಿಸೀದೆ ನಾನಿನ್ನ ನಿದ್ರೆ ಕೆಡಿಸೀದೆ ।
ನಾನಿನ್ನ ನಿದ್ದೇ ಕೆಡಿಸೀದೆ ರಾಗೀಕಲ್ಲೆ
ನಾ ತೂಗಿ ಬಿಡುತೀನಿ ಬಲದೋಳಾ ॥

ಕಲ್ಲೂ ಬಿಡ್ತೀನೆಂದು ಶಿಟ್ಯಾಕೆ ಸರಸತಿಯೆ
ಕುಕ್ಕೇಲಿ ರಾಗೀ ಬೆಳೆಯಾಲಿ ।
ಕುಕ್ಕೇಲಿ ರಾಗಿ ಬೆಳೆಯಾಲೀ ।
ತಕ್ಕೊಂಡು ಮತ್ತೆ ರಾತ್ರೀಗೆ ಬರುತೀನಿ ॥

---

3. ಇಲ್ಲಿ ಕೊಟ್ಟಿರುವ ಪದಗಳಲ್ಲಿ ಮೊದಲ ಮೂರು "ಗರತಿಯ ಹಾಡು" ಎಂಬ ಪುಸ್ತಕದಿಂದ ಆರಿಸಿಕೊಂಡವು. ಉಳಿದವು "ಹುಟ್ಟಿದ ಹಳ್ಳಿ—ಹಳ್ಳಿಯ ಹಾಡು" ಎಂಬ ಪುಸ್ತಕದಿಂದ ತೆಗೆದುಕೊಂಡವು.

ಕಲ್ಲೂ ಬಿಡ್ಡೀನೆಂದು ಎಲ್ಲಾರೂ ಕೇಳೀರಿ ।
ಕಲ್ಲೂ ಕಾವೇರೀ ಕಪನೀಯಾ ।
ಕಲ್ಲೂ ಕಾವೇರೀ ಕಪಿನೀ ಸಂಜ್ಯೆಯ್ಯಾನಾ ।
ಕಲ್ಬಿಟ್ಟು ಕೈಯ್ಯಾ ಮುಗಿದೇನೂ ॥

ಒಂದನೆಯದರಲ್ಲಿ ಇರುವ "ಹಳ್ಳಿಯ ರಾಗಿಬೀಸುವ ಹಾಡಿ"ನ ಆರಂಭವನ್ನು ಗಮನಿಸಿರಿ. ಕರಿಯ ಕೃಷ್ಣನು ಗೌರ ಪಾಟಲ ವರ್ಣಗಳ ಆರ್ಯಕುಲಕ್ಕೆ ಸೇರಿದವ ನಲ್ಲವೆಂದು ಹೇಳುವ ವಿದ್ವಾಂಸರಿದ್ದಾರೆ. ಆದುದರಿಂದ ಕೃಷ್ಣನು ಸನಾತನ ಸಂಸ್ಕೃತಿಯ ಮೂಲಾಧಾರವಾದ ಗೀತೆಯ ಉಪದೇಶಕನು ಎಂಬ ದೃಷ್ಟಿ ಯಿಂದ ನೋಡಿರಿ. ಎರಡನೆಯದರಲ್ಲಿರುವ ಅತಿಶಯೋಕ್ತಿಯ ಸೊಂಪದೆಂತಹುದು! ಮೂರನೆಯದರಲ್ಲಿರುವ ಭಾವವನ್ನು "ಗಣೇಶನು ತಾಯ್ತಂದೆಗಳಿಗೆ ಪ್ರದಕ್ಷಿಣ ಮಾಡಿ, ಭೂಮಂಡಲವನ್ನು ಸುತ್ತಿಬಂದ ಷಣ್ಮುಖನನ್ನು ಗೆದ್ದನು" ಎಂಬ ಪುರಾಣ ಕಥೆಯೊಡನೆ ಹೋಲಿಸಿರಿ. ನಾಲ್ಕನೆಯದರಲ್ಲಿರುವ "ಬಂದ ಗುರುವಿಗೆ ಅಗ್ಗಣಿ ಕೊಡುವ", "ಪಾತ್ರಾರೆ ಬೆಳಗಿರ್ಸಿ ಬಿನ್ನಹಕೆ ನಮ್ಮನ್ನೆ ದಯವಾಗಿ" ಎಂದು ಪ್ರಾರ್ಥಿಸುವ ಭಾವಗಳು ಅತಿಥಿಗಳನ್ನು ಅರ್ಘ್ಯ ಪಾದ್ಯಾಚಮನಗಳಿಂದ ಸತ್ಕರಿಸುವ, ಗುರುವಿಗೆ ಭಿಕ್ಷಾ ವಂದನೆ ಮಾಡುವ ವೈದಿಕನ ಭಾವಗಳ ಸಜಾತೀಯವಲ್ಲವೆ ಯೋಚಿಸಿರಿ. ಕೊನೆಯದರಲ್ಲಿರುವ ಹರಕೆಯು ಕಾವ್ಯಗಳ ಫಲಸ್ತುತಿ, ನಾಟಕಗಳ ಭರತವಾಕ್ಯ—ಇವುಗಳ ಸ್ಥಾನೀಯವಲ್ಲವೆ ನೋಡಿರಿ. ಹಾಗೆಯೇ, ರಾಗಿಯ ಕಲ್ಲನ್ನು "ನಾ ನಿನ್ನ ಸೋಲಿಸೀದೆ (ಆಯಾಸ ಪಡಿಸಿದೆ) ನಾ ನಿನ್ನ ನಿದ್ದೆ ಕೆಡಿಸೀದೆ" ಎಂದು ಮರುಕದಿಂದ ಸಂಬೋಧಿಸುವ ಮಾತನ್ನು ಕರ್ಮಠರು ತಮ್ಮ ಉಪಕರಣಗಳನ್ನು ಸಂಬೋಧಿಸುವ ಮಂತ್ರಗಳೊಂದಿಗೆ ಹೋಲಿಸಿರಿ.

## (ಆ) ನೈಮಿತ್ತಿಕ ವರ್ಗ—(೧) ಶಾಸ್ತ್ರದ ಹಾಡುಗಳು

೨೭. ಆಶೀರ್ವಾದ (ಮದುವೆಯಲ್ಲಿ)—

ಗಿರಿಶೆಟ್ಟಿ ಗಿರಿರಾಮ । ಸರಿಗೆ ದೇವಕ್ಕ ॥
ಮಗಳು ಬರುತಾಳೆಂದು । ಕಂಚಿ ಕಾಳಂಗಿ ॥
ಕುಡಿ ಸೀರ ಗಿಂಡಿ । ಪುಣ್ಯವಂತರ ಮಗಳೇ ॥
ಭಾಗ್ಯವಂತರ ಮಗಳೇ । ಬಸವಣ್ಣ ಬರುತಾನೆ ॥
ತೆಗೆ ನಿನ್ನ ಮುಸುಕು । ಸೋಬತ್ತು ಸೋಬಾತೆ ।
ಸೋಬತ್ತು ಸೋಬಾನೆ ॥
ಕಲ್ಲು ಕಲ್ಲಾಗಿ । ಕರೆಚ್ಚನಾಗಿ ॥
ಭೀಮಣ್ಣನಾಗಿ । ಗುರು ರೇವಣ್ಣ ಕಟ್ಟದ ।
ಸೇಸೆ ಸ್ಥಿರವಾಗಿರಲೀ ।
ಮಹಾಲಕ್ಷ್ಮಿ ಗೌರಿ ಪಾರ್ವತಿ ।
ಸರಸ್ವತಿ ಶಾಂತ ಮುತ್ತೈಯ್ಯನವರು ॥

ನಮ್ಮ ಗುರು ರೇವಣ್ಣ ಕಟ್ಟಿದ ।
ಕಲ್ಯಾಣ ಪಟ್ಟ ಸ್ಥಿರ ಜೀವಿಯಾಗಿರಲೀ ॥ ('ಕುರುಬರ ಚರಿತ್ರೆ'ಯಿಂದ)

೨೮. ಚೆಟ್ಟು ಬಡಿಯುವ ಹಾಡು—

ಬಾಳೆಯ ಮರದ ಕೆಳಗೆ । ಭಾವನ ಮಗಳು ಮೈನೆರೆದಳು ॥
ನಿಂಬೆಯ ಮರದ ಕೆಳಗೆ । ರಂಭೆ ಮೈನೆರೆದಳು ॥
ಸೋಬಾನವೇ ಸೋ ಸೋಬಾನವೆ ॥ ೧ ॥

ಮಾವಿನ ಮರದ ಕೆಳಗೆ । ಮಾವನ ಮಗಳು ಮೈನೆರೆದಳು ॥
ಚಿಗುಳಿಯ ತಂಬಿಟ್ಟಿನ ಉಂಡೆ । ಮಡಲೊಡ್ಡೆ ಪಾರ್ವತಿ ॥
ಸೋಬಾನವೇ ಸೋ ಸೋಬಾನವೆ ॥ ೨ ॥

೨೯. ಹಸೆಯನಿಕ್ಕುವ ಹಾಡು—

ಹೆಣ್ಣ ಚಿಕ್ಕವ್ವಾ ಹೆಣ್ಣೋರ ದೊಡ್ಡವ್ವ ಸಣ್ಣಕ್ಕೀ ಹಂಗೇ ಅವರವ್ವ ।
ಗಂಡೋರ ಚಿಕ್ಕವ್ವಾ ಗಂಡೋರ ದೊಡ್ಡವ್ವ ದಪ್ಪಕ್ಕೀ ಹಂಗೇ ಅವರವ್ವ ॥

* * * * *

ಸಣ್ಣಕ್ಕಿ ಹಸೆಯಾ ಚನ್ನಾಗಿ ಬರೀರಮ್ಮಾ ಚಿನ್ನಾದಾ ಗೊಂಡೇಯ
ನೆರಿಗ್ಯೋರು ವಜ್ರದ ಗೊಂಡೇಯ ನೆರಿಗ್ಯೋರು ॥

ಚಿನ್ನಾದಾ ಗೊಂಡೇಯ ಸರಸತಿಯೆ ಚೆನ್ನಾಗಿ ತುಂಬೆ ಚೌಕಾವಾ ।
ಚೌಕ ತುಂಬ್ಯಾರೆ ಕಲಕಲನೆ ನಕ್ಕಾರೆ ಅಕ್ಕೆ ಮುತ್ತ ಬೆರಸ್ಯಾರೆ ।
ಅಕ್ಕೆ ಹೊಸ್ಮುತ್ತಾ ಏನೆಂದು ಬೆಸ್ಯಾಳೆ ಮಾವಾನಾ ಮಗಾ ಬರಲೆಂದು ।
ಮಾವಾನಾ ಮಗ ಬರಬೇಕಾವನಾ ಕೈಯ್ಯಾ ಹೂವೀನುಂಗುರವಾ ಗೆಲಬೇಕು ॥

ದೊಡ್ಡಕ್ಕಿ ಹಸೆಯಾ ಒಡ್ಡಾಗಿ ಬರೀರಮ್ಮ ವಜ್ರದ್ಗೊಂಡೇಯಾ ನೆರಿಗ್ಯೋರು ।
ವಜ್ರದ್ಗೊಂಡೇಯಾ ನೆರಿಗೇಯಾ ಸರಸತಿಯೇ ಒಡ್ಡಾಗಿ ತುಂಬೇ ಚೌಕಾವಾ ॥
ಒಡ್ಡಾಗೀ ತುಂಬೇ ಕಲಕಲನೆ ನಾಗೂತ ಅಕ್ಕೇ ಹೊಸ ಮುತ್ತಾ ಬೆಸ್ಯಾಳು ।
ಅಕ್ಕೇ ಹೊಸ್ಮುತ್ತಾ ಬೆಸ್ರೂತೇನೆಂದಾಳೂ ಅತ್ತೇಯ ಮಗಾ ಬರಲೆಂದೂ ॥

ಅತ್ತೇಯಾ ಮಾಗಾ ಬಂದಾರಾವನಾ ಕೈಯ್ಯಾ ಮುತ್ತೀನುಂಗೂರಾವಾ
ಗೆಲಬೇಕು ॥
ಬಾಗಿಲಿಗಿದೀರಾಗಿ ಬರೀರಮ್ಮ ಹಸೆಗೋಳಾ ಬಾಗಿಲಲ್ಲಾವೇ ಗಿಣಿಗೋಳು ।
ಬಾಗಿಲಲ್ಲಾವೆ ಗಿಣಿಗೋಳು ನಮ್ಮಾನೇ ಭಾಗ್ಯಾದಾ ನುಡಿಯಾ ನುಡಿದಾವೂ ॥
ಕಂಭಕ್ಕಿದಿರಾಗಿ ತುಂಬೀರಿ ಹಸೆಗೋಳಾ ಕಂಭದಲ್ಲಾವೇ ಅರಗೀಣೀ ।
ಕಂಭದಲ್ಲಾವೇ ಅರಗಿಣಿ ನಮ್ಮನೇ ಪುಣ್ಯಾದಾ ನುಡಿಯಾ ನುಡಿದಾವೂ ॥

(ಈ ಹಾಡಿನಲ್ಲಿರುವ ಮುಗಿದ ಪಙ್ಕ್ತಿಯ ಕೊನೆಯ ಭಾಗವು ಬರುವ ಪಙ್ಕ್ತಿಯಲ್ಲಿ ಮೊದಲ ಭಾಗವಾಗಿ ಬರುವುದನ್ನೂ, ಒಂದೇ ನುಡಿಯನ್ನು ಕೊಂಚ ಕೊಂಚ ಭೇದಗಳಿಂದ ಇನ್ನೊಂದು ನುಡಿಯಾಗಿ ಮಾಡುವುದನ್ನೂ ಗಮನಿಸಿರಿ.

ಹಳ್ಳಿಗರ, ಅದರಲ್ಲೂ ಶೂದ್ರಾಣಿಯ, ಹಾಡುಗಳಲ್ಲಿ ಇದೊಂದು ವಿಶೇಷವೆಂದು ತೋರುತ್ತದೆ. ಇದರಿಂದ—ಬಂದುದೇ ಬರುತ್ತಲಿರುವುದರಿಂದ—ಅನೇಕವೇಳೆ ಹಾಡಿನ ಕೇಂದ್ರ ವಿಷಯವೇ ತಪ್ಪಿಹೋಗುವುದೂ ಉಂಟು.)

ಮೊದಲನೆಯ ಆಶೀರ್ವಾದದಲ್ಲಿರುವ "ಕಲ್ಲು ಕಲ್ಲಾಗಿ. . . .ಸೇಸೆ ಸ್ಥಿರ ವಾಗಿರಲಿ" ಎಂಬುದನ್ನು 'ಅಶ್ಮೇವ ಸ್ಥಿರಾ ಭವ' ಎಂಬ ವಿವಾಹಾಂಗ ಮಂತ್ರ ದೊಡನೆ ಹೋಲಿಸಿರಿ. ಎರಡನೆಯದರಲ್ಲಿರುವ, ಚಿಗುಳಿಯ ಉಂಡೆಯನ್ನು ಮಡಿಲು ತುಂಬುವ ಪದ್ಧತಿಯನ್ನು ಬ್ರಾಹ್ಮಣರ ಅದೇ ಪದ್ಧತಿಯೊಡನೆ ಹೋಲಿಸಿರಿ. ಮೂರನೆಯದರಲ್ಲಿರುವ, "ಗಿಣಿಗೋಳು ಸವಮ್ಮಾನೇ ಭಾಗ್ಯಾದಾ ನುಡಿಯಾ ನುಡಿದಾವು . . . . ಪುಣ್ಯಾದಾ ನುಡಿಯಾ ನುಡಿದಾವೂ" ಎಂಬುದನ್ನು ಶುಭಾಶುಭ ಕರ್ಮಗಳಲ್ಲೆಲ್ಲ ಬರುವ ಪುಣ್ಯಾಹದಲ್ಲಿ ಬರುವ, "ಸರ್ವತೋ ಸಶ್ಯಕುನೇ ಭದ್ರವಮಾವದ । ವಿಶ್ವತೋ ಸಶ್ಯಕುನೇ ಪುಣ್ಯಮಾವದ" ಎಂಬುದರೊಡನೆ ಹೋಲಿಸಿರಿ. ಇಲ್ಲಿ, ಈ ಹಾಡುಗಳನ್ನು ಮಾಡಿದವರಿಗೆ ಈ ಮಂತ್ರಗಳು ಗೊತ್ತಿದ್ದು ಅದರರ್ಥವನ್ನು ಸೇರಿಸಿ ಇವನ್ನು ಬರೆದರು ಎನ್ನೋಣವೇ? ಅಥವಾ, ಆ ವಾತಾವರಣ ಪ್ರಭಾವದಿಂದ ಅದೇ ಭಾವವು ಹಾಡುವವರ ಮನದಲ್ಲಿಯೂ ಮೂಡಿತು ಎನ್ನೋಣವೇ?

## (೨) ಇತರ ಹಾಡುಗಳು

ಹೊಲ ಗದ್ದೆ ಕಾಯುವುದು, ದನ ಕುರಿ ಮಂದೆ ಕಾಯುವುದು, ನಾಟಿ ಕುಯ್ಲು ಮೊದಲಾದ ಸಂದರ್ಭಗಳಲ್ಲಿ, ವಿಶೇಷವಾಗಿ ಹೆಂಗುಸರು ಹೆಂಗುಸರೇ ಇರುವಾಗ, ಹಾಡಿಕೊಳ್ಳುವ ಹಾಡುಗಳಿವು. ಹಾಗೆಯೇ ದೇವತಾ ಪೂಜನಾದಿ ಗಳಲ್ಲಿಯೂ ಬರುವುದುಂಟು.

೩೦. ಗೀಜಗನ ಹಾಡು—

ಗೀಜಗನು ಎಲ್ಲಿಯೋ ಇದ್ದು ಬಂದಿದ್ದಾನೆ. ಗೀಜಗಿತ್ತಿಗೆ ಕೋಪ ಬಂದು ಅವನನ್ನು ಬಾಗಿಲ ಹೊರಗೆಯೇ ಇಟ್ಟಿದ್ದಾಳೆ. ಅವರಿಬ್ಬರಿಗೂ ಸಂವಾದ ನಡೆಯುತ್ತಿದೆ. (ಇದನ್ನು ಬ್ರಾಹ್ಮಣಿಯ 'ಸಂವಾದ' ಹಾಡುಗಳೊಡನೆ ಹೋಲಿಸಿರಿ.)

ಇದು ಯೇನು ಗೀಜಗಾ ಮೆಯ್ಯೆಲ್ಲ ಕೆಮ್ಮಣ್ಣು ।  
ಯಾವ ರಾಣಿ ತಡೆದಿದ್ದಾಳೊ ಯಾವ ಸೂಳೆ ತಡೆದಿದ್ದಾಳೋ ? ॥  
ಕೆಮ್ಮಣ್ಣು ಗುಂಡೀಲಿ ಕುಳಿತಿದ್ದು ಬಂದೇನೆ ।  
ನಿನ್ನಾಣೆ ಗೀಜಗಿತ್ತಿ ಕದವನ್ನು ತೆಗೆಯೇ ॥

ಇದು ಯೇನು ಗೀಜಗಾ ಮೆಯ್ಯೆಲ್ಲ ಗಮನಪ್ಪೋ ।  
ಕಸ್ತೂರಿ ಭರಣಿಯಲ್ಲಿ ಕುಂತಿದ್ದು ನಾ ಬಂದೆ ಗೀಜಗಿತ್ತಿ ॥  
ಮೂಡಲಿಕೆ ನಾ ಹೋಗಿ ಮುತ್ತಿನಾ ಗೊನೆ ತಂದೆ ।  
ಮುದ್ದು ಮಕ್ಕಳಿಗೆ ಕೊಡುವುದಕೆ ॥

ಬಾಳೇಯ ಸೀಮೇಗೆ ಹೋಗಿ ನಾ ಬಾಳೇಯ ಗೊನೆ ತಂದೆ ।
ಬಾಳುವ ಮಕ್ಕಳಿಗೆ ಕೊಡುವುದಕೆ ॥
ಬ್ಯಾಟೆರಾಯನ ಕಂಡು ಬೆದರಿ ಬೆಟ್ಟಾವ ಸೇರಿ ।
ಸೀಗೇಯ ಒಬ್ಬೆಯಲಿ ಸಿಕ್ಕಿದ್ದು ಬಂದೆ ಕಾಣೇ ಗೀಜಗಿತ್ತಿ ॥

ಮುಂಗೋಳಿ ಕೂಗೀತು ಮುಗಿಲು ಕೆಂಪಾದೀತು ।
ಧಗಧಗಾ ಸೂರ್ಯನೂ ವೈಯಾರದಿಂ ಬಂದ ॥
ಸೂಳೆಲ್ಲಿ ಬಿಟ್ಟು ಬಂದೆಯೋ ಗೀಜಗಾ ।
ರಾಣೆಲ್ಲಿ ಬಿಟ್ಟು ಬಂದೆಯೋ ॥

ತಾಮರಾ ಕಮಲದಲಿ ಮಲಗಿದ್ದು ಬಂದೆ ಕಾಣೇ ।
ಗೀಜಗಿತ್ತಿ ಕುಂತಿದ್ದು ಬಂದೆ ಕಾಣೇ ॥
ಸಾವಿರಾ ಮಕ್ಕಳಿಗೆ ಮೇವು ತಂದಿದ್ದೇನೆ ।
ಎದ್ದೇಳೆ ಗೀಜಗಿತ್ತಿ ಮೇವನ್ನು ಕೊಡು ಎದ್ದೇಳೆ ॥

ಹಾಸಿಗೆಯ ತುಳಿಬೇಡ ಮಂಚವಾ ಹತ್ತಬೇಡ ।
ತಣಿಗೇಲಿ ಉಣಬೇಡ ಚೆಂಬಿನಲಿ ಕುಡಿಬೇಡ ॥
ಮಕ್ಕಳನು ಮುಟ್ಟಬೇಡ ಮೇವ ನೀ ಕೊಡಬೇಡ ।
ಮಕ್ಕಳಾ ಗೋಳು ನೋಡೆ ಗೀಜಗಿತ್ತಿ ಮಕ್ಕಳಾ ಚಿಂತೆ ನೋಡೆ ॥

ಹುಲ್ಲುಸೀಮೆಗೆ ಹೋಗಿ ಹುಲ್ಲು ಸಾವಿರ ತಂದು ।
ಕೆಳಗೊಂದು ಗೂಡು ಕಟ್ಟೀ ಗೀಜಗಾ ಮೇಲೊಂದು ಗೂಡು ಕಟ್ಟೀ ॥
ಮೇಲಿನಾ ಗೂಡಿನಲಿ ನಾನೂ ನನ್ನ ಮಕ್ಕಳೂ ಇರುವೆವು ।
ಕೆಳಗಿನಾ ಗೂಡಿನಲ್ಲಿ ಒಬ್ಬನೇ ನೀನಿರು ಗೀಜಗಾ ॥

೩೧. ಯಮನ ಹಾಡು—

ಮತ್ತೊಂದು ಗಳಿಗೆ ತಡಮಾಡೋ । ಜವರಾಯ ।
ಮತ್ತೊಂದು ಗಳಿಗೆ ತಡಮಾಡೋ ॥ ಪ ॥

ಉಪ್ಪು ಸೊಪ್ಪು ನಾ ಮಾರಿ ಉಪ್ಪರೀಗೆ ಕಟ್ಟಸೀದೆ ।
ಉಪ್ಪರೀಗೆ ಭೋಗ ಕಾಣಲಿಲ್ಲ ॥

ಹೋರೀಯ ಮಾರೀಯೆ ವಾಲೇಯ ಮಾಡಿಸೀದೆ ।
ವಾಲೊಂದು ಅರಗಳಿಗೆ ಇಕ್ಕಲಿಲ್ಲ ॥

ಹಂದೀಯ ಮಾರೀದೆ ಬಂದೀಯ ಮಾಡಿಸಿದೆ ।
ಹುರುಳೀಯ ಮಾರೀದೆ ಸಣಗುಂಡು ಮಾಡಿಸಿದೆ ॥

ಉದಕವ ಮಾರಿದೆ ಪದಕವ ಮಾಡಿಸಿದೆ ।
ತೊಗರೀಯ ಮಾರಿದೆ ಬುಗಡೀಯ ಮಾಡಿಸಿದೆ ॥

ಈವತ್ತು ಸಪ್ಪರ ನಾಳೆಗೆ ದಾರೆಯು ।
ಹೆಂಗೆ ಬಿಟ್ಟು ಬರಲೋ ಯಮರಾಯ ॥

ಆಗುವ ಮದುವೆ ಆಗುತಾವೆ।
ಹಿಂಡೋ ಯೆಮ್ಮೆಗಳು ಹಿಂಡೂತಾವೆ॥
ಹಾಕೋಳು ಬರುತಾಳೆ ಪುರನಾರಿ ಬರುತಾಳೆ।
ಪುರಚೆಲುವೆ ಬರುತಾಳೆ ನೀನಡೆಯೇ ಮುಂದೆ॥

ಬೆಣಸು ಕಲ್ಲಲ್ಲಿ ಗುಂಜುತಾರೆ।
ಗಾಯಕೆ ಹೊಸ ಸುಣ್ಣ ಕಲಸಿ ಇಡುತಾರೆ॥
ಪಾಪ ಮಾಡಿದ ಕರುಮಿ ನೀನು। .
ದ್ರೋಹ ಮಾಡಿದ ಕರುಮಿ ನೀನು॥

ಆಗ ಮಾಡಿದ ಪಾಪವೆಲ್ಲ ಆಗ ಮಾಡಿದ ದ್ರೋಹವೆಲ್ಲ।
ಈಗ ಕಳೆಯೆಂದು ಬೆಂಕಿಕೊಂಡದಿ ಎಳೆಯುತಾರೆ॥

## ೩೨. ಹರಿಗೋಲು ಹಾಡು, ಅಥವಾ ಗಂಗಮ್ಮನ ಹಾಡು—

['ಅಮ್ಮ'ಯೇಳುವುದಕ್ಕೆ ಗಂಗಮ್ಮ ಮಾರಮ್ಮ ಎಂಬ ಇಬ್ಬರು ಅಕ್ಕ ತಂಗಿಯರು ಕಾರಣರಂತೆ. ಅದರಲ್ಲಿ ಗಂಗಮ್ಮನು ಮೊದಲು ಕಾಲಿಟ್ಟು ಬಂದರೆ ಅಮ್ಮ ಯೆದ್ದವರು ಉಳಿಯುವುದು ಕಷ್ಟ; ಉಳಿದರೂ ವಿಕಾರವಾಗದೆ ಇರುವುದಿಲ್ಲ. ಮಾರಮ್ಮನು ಮೊದಲು ಬಂದರೆ ಉಳಿಯುವುದು ನಿಶ್ಚಯ; ವಿಕಾರವಾಗುವುದು ಅಪರೂಪ—ಎಂಬ ಒಂದು ನಂಬಿಕೆಯು ಇದೆ. ಈ ಹಾಡು ಆ ಗಂಗಮ್ಮನು ಅಷ್ಟು ಕ್ರೂರಳಾಗುವುದಕ್ಕೆ ಕಾರಣವನ್ನು ಹೇಳುತ್ತದೆ.] ಇದನ್ನು "ಹುಟ್ಟಿದ ಹಳ್ಳಿ—ಹಳ್ಳಿಯ ಹಾಡು" ಎಂಬುದರಲ್ಲಿರುವ ದೊಡ್ಡಮ್ಮನ ಹಾಡಿನೊಡನೆ ಹೋಲಿಸಿರಿ.

ಆಚೆಕಡೆ ಹೆತ್ತೋರ ಮನೆ ಈಚೆಕಡೆ ತವರೋರು ಮನೆ।
ನಟ್ಟನಡುವೆ ಮುತ್ತಿನ ಹರಿಗೋಲು॥

ಆ ಹರಿಗೋಲನ್ನು ನಡೆಸುವ ಹೊನ್ನಯ್ಯನೂ ಗಂಗಮ್ಮನೂ ಸೋದರರು. ಅವನು ಹುಟ್ಟುತ್ತಲೇ ಅಂಬಿಗರ ಮನೆಗೆ ಅವನನ್ನು ಕೊಟ್ಟುಬಿಟ್ಟುದರಿಂದ ಅವನಿಗೆ ಗಂಗೆಯು ಸೋದರಿಯೆಂಬುದು ತಿಳಿಯದು; ಇವಳಿಗೆ ಅದು ಗೊತ್ತು. ಒಂದು ದಿನ ಇವಳು ಹರಿಗೋಲನ್ನು ಏರಿ ಅತ್ತ ಕಡೆಗೆ ಹೋಗಲು ಬಂದಿದ್ದಾಳೆ. ನಡುಹೊಳೆಯಲ್ಲಿ ಹೊನ್ನಯ್ಯನು ಅವಳನ್ನು ಕಾಮತೃಪ್ತಿಗಾಗಿ ನಿರ್ಬಂಧಪಡಿಸುತ್ತಾನೆ—

ಮದುವಾಗಿ ಮೂರೇ ತಿಂಗಳು ಮೈನೆರೆದು ಆರೇ ತಿಂಗಳು।
ಧಾರೆ ಸೀರೆ ಉಟ್ಟಿರುವೆನಣ್ಣ ಧಾರೆ ಕುಬಸ ತೊಟ್ಟಿರುವೆನಣ್ಣ॥
ಮದುಲಕ್ಕಿ ಕಟ್ಟಿರುವೆನಣ್ಣ। ಮುಡಿಯ ಬಾಚಿಂಗ ಕಳೆಯಲಿಲ್ಲಣ್ಣಾ।
ಪಾಪಕಿನ್ನು ಗುರಿಯಾಗಬೇಡ ಒಂದು ತಾಯಿಮಕ್ಕಳೋ॥

ಒಂದಾಗ್ಹುಟ್ಟಿದ ಒಡಹುಟ್ಟು ಕಾಣೊ ಹೊನ್ನಯ್ಯ ಕೇಳೋ।
ಅಪ್ಪ ಕೊಟ್ಟ ಒಡವೆ ಕೊಳ್ಳೊ ಅಮ್ಮ ಕೊಟ್ಟ ಬುತ್ತಿ ಕೊಳ್ಳೊ॥
ನಾಗಪುರಿ ಬೇಸುಕೊಳ್ಳೋ ಪಾಪಾತ್ಮ ಹೊನ್ನಯ್ಯ ಕೇಳೋ।
ಕಡುಚೆಲ್ವೆ ತಂದು ಮದುವೆ ಮಾಡೀನೋ ದೋಚಾತ್ಮ ಹೊನ್ನಯ್ಯ ಕೇಳೋ॥

ಮೈಸೂರಿಗೆ ಹೋಗಬೇಕು ಚಾಮುಂಡವ್ವನ ಸೇವೆ ಮಾಡಬೇಕು ।
ಹರಿಸೇವೆ ಮಾಡಬೇಕು ಹೆಣ್ಣುಸೇವೆ ಮಾಡಬೇಕು ಗಂಡುಸೇವೆ ಮಾಡಬೇಕು ॥
ಕರುಪೂರ ಬೆಳಗಬೇಕು ಹಣ್ಣುಕಾಯಿ ಕೊಡಬೇಕು ।
ಅನ್ನದಾನ ಮಾಡಬೇಕು ವಸ್ತ್ರದಾನ ಮಾಡಬೇಕು ॥

(ಹೀಗೆಯೇ ಸ್ವಾಮಿ ನಂಜುಂಡಪ್ಪನಿಗೂ ತಿರುಪತಿಯ ತಿಮ್ಮಪ್ಪನಿಗೂ ವಿಧವಿಧವಾದ ಸೇವೆ ಸಲ್ಲಿಸಬೇಕು.)

ಮುಟ್ಟಲುಬೇಡ ಹೊನ್ನಯ್ಯ ಅಂಟಲುಬೇಡ ಹೊನ್ನಯ್ಯ ।
ಲಾಲಿಸಣ್ಣ ನನ್ನ ಮಾತು ಕರ್ಮಾವ ಕಟ್ಟಾ ಬೇಡಪ್ಪಾ ॥

ನೀನು ಯಾವ ತಾಯಿ ಮಗಳೊ ನಾನು ಯಾವ ತಂದೆ ಮಗನೋ ।
ಇಲ್ಲಿಯೇ ಇಲ್ಲವೇ ಸ್ವಾಮಿ ಹವಳದ ಸರ ಕೊಳ್ಳೇ ।
ಕೊರಳಿಗೆ ಮುತ್ತಿನ ಹಾರ ಕೊಳ್ಳೇ ॥

ಬಗ್ಗಿತಲ್ಲೋ ಹರಿಗೋಲು ಬಾಗಿತಲ್ಲೋ ಹರಿಗೋಲು ।
ನಿಂತಿತಲ್ಲೋ ನಿನ್ನ ಹರಿಗೋಲು ಪಾಪಾತ್ಮ ಹೊನ್ನಯ್ಯ ಕೇಳೋ ॥

ಅಲ್ಲಿಗೂ ಅವನಿಗೆ ಬುದ್ಧಿ ಬರಲಿಲ್ಲ. ಹುಡುಗಿಯು ಹೆದರಿ ದ್ವೀಪಾಂತರದಲ್ಲಿದ್ದ ತನ್ನ ಅಕ್ಕನನ್ನು ನೆನೆದಳು. ಅವಳು ರಾಕ್ಷಸಿಯ ರೂಪಿನಿಂದ ಬಂದು ಕಾಣಿಸಿಕೊಂಡಳು.

ಒಂದು ಸೆರಗ ಕಟ್ಟವಳೆ ತಾಯಿ ಒಂದು ಸೆರಗ ಬಿಟ್ಟವಳೆ ।
ಆಗ ಹುಡುಗಿಯು ಅಳುತ್ತಾ, ಅಕ್ಕನೊಡನೆ,
ಮುತ್ತಿನಂತಾ ಮುಚ್ಚಿದ ಸೆರಗು ಹಿಡಿದು ಜಗ್ಗುತಾನೆ ।

ಎಂದು ಅತ್ತುಕೊಂಡಳು. ಮಾರಿಗೂ ಅವನು ಸಗ್ಗಲಿಲ್ಲ. ಆಗ ಅವಳು ಕಪಿಲಯ್ಯನೆಂಬ ತನ್ನ ಗಂಡನನ್ನು ಬರಮಾಡಿದಳು. ಅವನು, "ನೀನು ಬ್ರಾಹ್ಮಣರ ಮಗಳು, ನಾನು ಮಾದಿಗರ ಮಗನು. ನಾನೂ ನೀನೂ ಕೂಡಿಕೊಂಡು ಇಲ್ವಾ? ಬೆರಕೊಂಡೂ ಇಲ್ವಾ? ಹಾಗೆಯೇ ಇವರು ಇರಲಿ" ಎಂದನು. ಮಾರಿಗೆ ರೇಗಿಹೋಯಿತು. (ಅದುವರೆಗೂ ಈ ವಿಷಯವು ಅವಳಿಗೆ ತಿಳಿಯದೋ: ಏನೋ !) ಕೂಡಲೇ—

ನಾನು ಮಾರಿಯಾಗಿ ನೀನು ಕೋಣನಾಗಿ ।
ನಿನ್ನ ಕಡಿದು ತಂದು ನನಗೆ ಬೊಟ್ಟಿಡಬೇಕು ॥

ಎಂದು ಶಾಪ ಕೊಟ್ಟು ಅವನನ್ನು ಸುಟ್ಟಳು. ಅವಳ ಅಪ್ಪಣೆಯಿಂದ ಹೊಳೆಯಲ್ಲಿ ಆನೆಗಾತ್ರ ನೀರು ಬಂದು ಗಂಗಮ್ಮನನ್ನು ದಡಕ್ಕೆ ಹಾಕಿ ಹರಿಗೋಲನ್ನು ಕೊಚ್ಚಿಕೊಂಡುಹೋಯಿತು. ಹೊನ್ನಯ್ಯನು ಉಳಿಸೆಂದು ಕೇಳಿಕೊಂಡನು. ಗಂಗಮ್ಮನು ಬೇಡವೆಂದರೂ ಮಾರಮ್ಮನು ತಮ್ಮನೆಂದು ಉಳಿಸಿದಳು. ಗಂಗಮ್ಮನು ಕಡಲಿಗೆ ಬಿದ್ದು ಗಂಗಮ್ಮನೆಂಬ ದೇವತೆಯಾದಳು.

೩೩. ಶೆಟ್ಟರ ಹಾಡು[4]—

ಸುವಣ್ಣಾಲೀ । ಜಾಗಾಲೀ । ಸುವಣ್ಣಾಲೀ ॥
ಬಂದಾರು ಶೆಟ್ಟರು ಎಳೆಯೆಂತ ಸಾರಿದಾರು ॥ ಸು ॥
ಬಳೆಯೆಂದು ಸಾರಿದ ಸೊಲ್ಲ ಕೇಳಿದವಳಮ್ಮ ॥ ಸು ॥
ಸಾರಿದ ಸೊಲ್ಲ ಕೇಳಿಕೊಂಡು ನಮ್ಮಟ್ಟಿಗಾದರೂ ಬನ್ನಯ್ಯ ಶೆಟ್ಟರೇ ॥ ಸು ॥
ನಿಮ್ಮಟ್ಟಿ ನಾನು ಅರಿಯೆನಮ್ಮ । ನಿಮ್ಮ ಬಾಗಾಲು ನಾನರಿಯೆನಮ್ಮ ॥ ಸು ॥
ನಮ್ಮಟ್ಟಿ ಬಾಗಾಲ ಮುಂದೆ । ಮಕ್ಕಳಾಡೋ ಮಂಟಪವಯ್ಯಾ ॥ ಸು ॥
ನಮ್ಮಟ್ಟಿ ಬಾಗಾಲ ಮುಂದೆ । ಮಕ್ಕಳೋದೋ ಪಳ್ಳಿ ಚಾವಡಯ್ಯಾ ॥ ಸು ॥
ನಮ್ಮಟ್ಟಿ ಬಾಗಾಲ ಮುಂದೆ । ಟಗರ ಕಾಳಗ ಮಾಡುತಾರಯ್ಯ ॥ ಸು ॥
ನಮ್ಮಟ್ಟಿ ಬಾಗಾಲ ಮುಂದೆ । ಬಟ್ಟಿ ನುಗ್ಗೆ ಮರವಯ್ಯಾ ॥ ಸು ॥
ನಮ್ಮಟ್ಟಿ ಬಾಗಾಲ ಮುಂದೆ । ಕೆಂದೆಂಗಿನ ಮರವಯ್ಯಾ ॥ ಸು ॥
ನಮ್ಮಟ್ಟಿ ಬಾಗಾಲ ಮುಂದೆ । ಕಿತ್ತಳೆ ವನವಯ್ಯಾ ॥ ಸು ॥
ನಮ್ಮಟ್ಟಿ ಬಾಗಾಲ ಮುಂದೆ । ಹಿರಳೀಯ ಮರವಯ್ಯಾ ॥ ಸು ॥
ನಮ್ಮಟ್ಟಿ ಬಾಗಾಲ ಮುಂದೆ । ಬಾಳೀಯ ಮರವಯ್ಯಾ ॥ ಸು ॥
ಬಾಳೀಯ ಬಲಕಾಕೀ । ಹಿರಳೀಯ ಎಡಕಾಕೀ ॥
ಬಂದಾರು ಶೆಟ್ಟರು ಬಂದರಯ್ಯಾ । ಬಂದರಯ್ಯಾ ॥ ಸು ॥

ಈ ಸಂದರ್ಭದಲ್ಲಿ ಗೋವಿನ ಹಾಡು, ಅವಶ್ಯವಾಗಿ ಬರಬೇಕು. ಅದು ಎಲ್ಲರಿಗೂ ತಿಳಿದಿದೆಯಾಗಿ ಇಲ್ಲಿ ಬೇಡವೆಂದು ಬಿಟ್ಟಿದ್ದೇವೆ.

ಏನೋದದ ಹಾಡುಗಳಲ್ಲಿ ಪುರಾಣದ ಕಥೆಗಳೂ, ಪುರಾಣ ಪುರುಷರನ್ನು ಸಾಮಾನ್ಯರಂತೆ ಚಿತ್ರಿಸುವ ಕಥೆಗಳೂ ಉಂಟು. ಒಂದರಲ್ಲಿ ರುಕ್ಮಿಣಿಯು ಕೃಷ್ಣನ ಮಾತು ಕೇಳದಿರಲು, ಅವನು ಮಾಯದ ಚೇಳು ಕಡಿಸಿದನೆಂದು ಬರುತ್ತದೆ. ಈ ಭಾಗದಲ್ಲಿಯೂ ಬ್ರಾಹ್ಮಣಿಯ ಪದಗಳಿಗೂ ಈ ಪದಗಳಿಗೂ ವ್ಯತ್ಯಾಸವಿದ್ದಂತೆ ತೋರುವುದಿಲ್ಲ.

ನಾವು ಹಿಂದೆ ಉದಾಹರಿಸಿರುವ ಹಾಡುಗಳಿಂದ ಬ್ರಾಹ್ಮಣಿಯ ಅಂತಸ್ಸತ್ವವು ವ್ಯಕ್ತವಾಗುವಷ್ಟು ಇಲ್ಲಿ ಶೂದ್ರಾಣಿಯು ಎಂತಹವಳು ಎಂಬ ಅಂಶವು ಸ್ಫುಟವಾಗಿಲ್ಲ. ಆದರಿಂದ ಹಿಂದಿನ ಲಾವಣಿಯೊಂದನ್ನು ತೆಗೆದುಕೊಂಡು ಬ್ರಾಹ್ಮಣಿಯಲ್ಲದ ಆ ಕಥೆಯ ನಾಯಕಿಯ ಚಿತ್ರವನ್ನು ಅಲ್ಲಿರುವಂತೆ ಸ್ವಲ್ಪದಲ್ಲಿ ತೋರಿಸಿ ಈ ಭಾಗವನ್ನು ಮುಗಿಸೋಣ.—

೩೪. ದೀಪಳಿಗೆ ಲಾವಣಿ—

---

4. ಈ ಹಾಡು ತಗಡೂರಿನ ಖಾದಿ ಕೇಂದ್ರದ ಅಧಿಕಾರಿಗಳ ವಿಶ್ವಾಸದಿಂದ ದೊರಕಿದುದು ; ಇದನ್ನು 'ಹಳ್ಳಿಯ ಹಾಡಿ'ನಲ್ಲಿರುವ ಶೆಟ್ಟರ ಪದಗಳೊಡನೆಯೂ, ಹಾಗೆಯೇ ಪುರಂದರದಾಸರ ದಾಸಯ್ಯನ ಪದದೊಡನೆಯೂ ಹೋಲಿಸಿರಿ.

ನಾಲ್ಕು ದಿಕ್ಕಿಗೆ ಹಬ್ಬ ಬಂದಿತು ಒಳ್ಳೇ ದೀವಳಿಗೆ ।
ನಾಚುತ ನಲಿಯುತ ಹೆಣ್ಣಿಳು ಬಂದರು ತನ್ನ ತವರು ಮನೀಗೆ ॥ ಪ ॥

* * * *

ಮತ್ತೆ ಬರಲಿಲ್ಲ ಅವರೊಳಗೊಬ್ಬಳು ಗೌಡನ ಮಗಳೀಗೆ ॥

ಅವಳು ಹೋಗಿ ಮಗನನ್ನು ಕುರಿತು, "ನಿನ್ನ ತಂಗಿಯು ಬರಲಿಲ್ಲ ; ಹೋಗಿ ಕರೆದುಕೊಂಡು ಬಾ" ಎಂದಳು. ಅವನೂ,

ಇರುವಳೊಬ್ಬಳು ತಂಗಿ ಹೊರ್ತು ಇನ್ನಾರೂ ಯಿಲ್ಲಾ ಯೆನಗೆ ।
ಹಿರಿಯನಾಗಿ ನಾನೊಬ್ಬನೆ ಹೊರ್ತು ಇನ್ಯಾರ ಆಶೆ ತಂಗೀಗೆ ॥
ಕರೆಯದ್ಹೋದರೆ ಚಿಂತೆ ಮಾಡ್ಯಾಳು ತಂಗೀ ತನ್ನ ಮನದಾಗೆ ।

ಎಂದುಕೊಂಡು, ಮಾಡುತ್ತಿದ್ದ ಕೆಲಸ ಬಿಟ್ಟು ಬಂದು ಬುತ್ತಿ ಕಟ್ಟಿಕೊಂಡು ತಂಗಿಯ ಮನೆಗೆ ಹೊರಟನು.

ಹೋರಿ ತಂದು ನಿಲಿಸಿದ ಆತನು ತಡಮಾಡದೆ ಹೀಗೆ ।
ಕೊರಳಿಗೆ ಸರಪಣಿ ಗೆಜ್ಜಿ ಹಣೆಪಟ್ಟಿ ಹಾಕಿದ ಹೋರೀಗೆ ॥
ವಾರೆ ಮುಂಡಾಸ ಕಾಲಾಗಿರಿಯಂಗಿ ವುಡುಗೆ ತೊಡುಗೆ ಮ್ಯಾಗೆ ।
ಭಾರಿ ಧೋತ್ರವೊಂದು ಶೃಂಗಾರವಾದನು ಸೊಗಸಾಗೆ ॥
ಹರುಷದಿಂದ ಊಟ ಮಾಡಿ ಪಟ್ಕಾ ಕಟ್ಟಿದ ಬೆನ್ನಿನ ಮ್ಯಾಗೆ ।
ಕೊರಡ ಹಿಡಿದು ಹೋರಿಯೇರಿ ಬಿಟ್ಟನು ಒಂದೆ ರಭಸಿನಾಗೇ ।
ಮೂರು ಗಂಟೆಗೆ ದಾಖಲ್ ಆದನು ತಂಗಿ ವೂರಿನಾ ಒಳಗೆ ॥

ತಂಗಿಯು ಅಣ್ಣನನ್ನು ಪ್ರೀತಿಯಿಂದ ಬರಮಾಡಿಕೊಂಡು, "ನೀರು ಎರೆದಳು ಎಣ್ಣೆವೊತ್ತಿ ಅಣ್ಣನಿಗೆ । ಪರಿಪರಿ ವೂಟ ಮಾಡಿ ಸೊಗಸಾಗಿ ಬಡಿಸಿದಳು ಅಣ್ಣನಿಗೆ ॥" ಅವನು ಹೋಗಿ ಮಲಗಿದನು.

ಗಂಡನು ಬರಲು, ಅವನನ್ನು "ಕರೆದು ಪಾದವ ತೊಳೆದಳು ಗಂಡಗೆ". ಊಟ ವನ್ನು ಮಾಡಿ ತಾಂಬೂಲವನ್ನು ಸೇವಿಸುತ್ತ ಇಬ್ಬರೂ ಮಂಚದ ಮೇಲೆ ಕುಳಿತಿರಲು,—

ಕಾಂತ ಕೇಳು ಒಂದು ಮಾತು ಬಿನ್ನಹ ಮಾಡಿಕೊಂಬೆ ನಿಮಗೆ ।
ಸಂತೋಷದಿಂದಲೀ ಕಳುಹಿಸಿಕೊಟ್ಟರೆ ಹೋಗುತೇನೆ ತವರು ಮನೀಗೆ ॥

ಎಂದಳು. ಗಂಡನು,—

ಎಂತ ಮಾತನುಸುರುವೆ ಭಾವಕಿ ನಾಚಕಿಲ್ಲವೇ ನಿನಗೆ ।
ಅಂತ ದಿಕ್ಕಿದ್ದರೆ ಬಾರದಿರುವರೆ ಕರೆಯಲೀಕೆ ನಿನಗೆ ॥

ಸಂತೋಷದಿಂದಲೀ ಹಬ್ಬವ ಮಾಡಿಕೊ ಏನು ಕಮ್ಮಿ ನಮ್ಮ ನೆಯಾಗೆ ।
ಮತ್ತೆ ನೀಡು ಬಂಧು ಬಳಗಕೆ ಪರದೇಸಿ ಜೋಗಿ ದಾಸರಿಗೇ ॥

ಎಂದನು. ಆಗ ಅವಳು ತನ್ನ ಅಣ್ಣನು ಕರೆಯುವುದಕ್ಕೆ ಬಂದಿರುವುದನ್ನು ಹೇಳಲು, ಅವನ ಸಿಟ್ಟೆಲ್ಲವೂ ಇಳಿದು, "ಚಿಂತೆಮಾಡಬೇಡ ಹೋಗಿ ಬಾ । ವಾರಿಗೆ ಸ್ತ್ರೀಯರೊಳು

ತೋರುವ ವಸ್ತ್ರಗಳಿಟ್ಟುಕೋ ಮೈಮೇಗೆ। ತೆಗೆದುಕೋ ಒಡವೆಪೆಟ್ಟಿಗೆ ಹೊರಗೆ॥"
ಎಂದು ಹೇಳಿದನು. ಆಗ,—

ಸರಸಿಜಾಕ್ಷಿ ಜಡೆ ಹಾಕಿದಳು ರ್‍ಯಾಗಟೆ ಅದರ ಮೇಗೆ।
ಭರದಿ ಜಡೇಬಿಲ್ಲೆ ಕೇದಿಗೆ ಚೌವಲಿಕಟ್ಟು ಕುಚ್ಚು ಬಿಟ್ಟಳು ಹಣೆಮೇಗೆ॥
ಮುಂಗುರುಳೊತ್ತಿದ ಬೈತಲೆಬಿಟ್ಟಳು ವಾರೆ ಚಂದ್ರನ್ನಂಗೆ।
ಬೇಸ್ರರಿ ಬುಲಾಕು ನತ್ತನಿಟ್ಟಳು ನಾಸಿಕ ಸೊಗಸಾಗೇ॥

ಕರ್ಣದಿ ಬುಗುಡಿ ಚಂದ್ರಮುರಾ ವೋಲೆ ಜುಮುಕಿ ಮುತ್ತಿನ್ನಂಗೇ।
ಕೊರಳೊಳು ಕಟ್ಟ್ಯಾಳು ಚಿಂತಾಕಡ್ಡಿಕೆ ಲಾಡಿ ಜೊತೆಯಾಗೆ॥
ಭರದಿ ಪದಕ ಮೋಹನ ಮಾಲೆ ದೊಡ್ಡ ಗುಂಡು ಬಿಟ್ಟ್ಯಾಳು ಕೆಳಗೆ।
ಭರ್ಜರಿ ಕರಿಶೀರೆ ಉಟ್ಟಳು ಕುಪ್ಪಸ ತೊಟ್ಟಳು ಮೇಲೆ॥

ಹರಿಯಂತೆ ತೋರುವ ಅರ್ಧಡಿ ಡಾಬು ಯಿಟ್ಟ್ಯಾಳು ಸೊಂಟದಾಗೆ।
ಸರಸಿಜಾಕ್ಷಿಗೆ ಸೇರಿನ ಕರಡಿಗೆ ಸರಪಣಿ ಸೊಗಸಾಗೆ।
ಗಗ್ಗರಿ ಪಾಗಡೆ ಪಿಲ್ಲಿಯನಿಟ್ಟಳು ನಾರಿ ಕಾಲಿನಾಗೆ॥

ಹೀಗೆ ಸರ್ವ ಶೃಂಗಾರವಾಗಿ ನಿಂತ ಬಾಲೆಯನ್ನು ಗಂಡನು ಬರಸೆಳೆದಪ್ಪಿ, "ರಂಭೆ! ಭಂಗಾರದ ಗೊಂಬೆ! ಯಾವಾಗ ಬರುವೆ?" ಎಂದನು. ಎಂಟು ದಿವಸದಲ್ಲಿ ಹೊರಟುಬರುವೆನೆಂದು ಹೇಳಿ, ಲಾಡು, ಪೇಣೀ, ಗರಗೊಬ್ಬಟ್ಟು, ಕಜ್ಜಾಯ, ಕಡುಬುಗಳ ಬುತ್ತಿ ಕಟ್ಟಿಕೊಂಡು ಅಣ್ಣನ ಜೊತೆಯಲ್ಲಿ ಹೊರಟಳು.

ದಾರಿಯಲ್ಲಿ ಬರುತ್ತ ಅಣ್ಣನಿಗೆ, "ಕತ್ತನು ಕೊಯ್ದು ಗೊತ್ತಾಗದಂತೆ ಹೊಡೆದುಹಾಕಿದರೆ ಎನಗೆ। ಮತ್ತೆ ಸಿಕ್ಕುವುದು ಒಡವೆಯು ಸಾಕಾಗುವಂತೆ ಎನಗೇ॥" ಎಂದು ಒಂದು ದುರಾಶೆಯು ತಲೆದೋರಿತು. ಕೂಡಲೆ,—

ಸತ್ಯವಂತೆ ಯೆಂಬುದ ತಿಳಿಯದೆ ಹೋರಿ ಬಿಟ್ಟ ಕಾಡಿನ ಕಡೆಗೇ।
ಯಾತಕಣ್ಣ ದಾರಿ ತಪ್ಪಿ ಹೊಡೆಯುತಿ ಹೋರಿ ಗುಡ್ಡದ ಕಡೆಗೆ?।
ಹೊಟ್ಟೆ ಬಹಳ ಹಸಿತವೆ ತಂಗಿ ನೀರುಂಟು ಹಳ್ಳದಾಗೆ॥

ತಂದು ಕಾಡಿಗೆ ಹೆಡೆಮುರಿ ಕಟ್ಟಿದ ವಟಾವೃಕ್ಷದಾಗೆ।
ಕುಂದದೆ ಬೆನ್ನಿನ ಪಟ್ಟವ ತೆಗೆದನು ಕಡಿದನು ತಂಗಿ ಕತ್ತಿನ ಮೇಗೆ॥

ಅದು ನಾಟದೆ ಹಾರಿಹೋಯಿತು ಕತ್ತಿ ಮಾಯದಾಗೆ।
ಸುಂದರಿ ಯಿಾಕೆ ಧ್ಯಾನದಿ ನಿಂತಳು ಹರಿಯ ಧ್ಯಾನದಾಗೆ॥

ಇತ್ತ ಇವನು,—

ನೋಡಿ ಕೋಪದಿ ರೌದ್ರವ ತಾಳಿದ ತನ್ನ ತಂಗಿ ಮೇಲೆ।
ಕಡಿದ ಕೈಯನು ಕೊಡಿದ ರಕ್ತವ ನೋಡಿದ ನಾಲ್ಕು ಕಡೇಗೇ॥
ಕಡಿದ ಪಟ್ಟಾ ನಾಟವೆ ಹೋಯ್ತು ಕಾಣದೆ ಕಣ್ಣೀಗೆ।
ತಡಕಿ ನೋಡಿದ ಗುಂಡು ಬಿದ್ದಿದೆ ಅದೇ ಮಣ್ಣಿನ ಮೇಗೆ।
ದುಂಡು ಮಿಾಶೆ ತಿರುವಿ ಯದೆಮುಂಡಿವೂರಿ ಯೆತ್ತಿದ ಹೆಗಲಮೇಗೆ॥

ಇದನ್ನು ಗುಡ್ಡದ ಮೇಲಿನ ಶಿವ ಪಾರ್ವತಿಯರು ಕಂಡರು. ಪಾರ್ವತಿಗೆ ಆ ಅನ್ಯಾಯವು ಸಹಿಸದೆ,—

ತ್ವರಿತದಿ ಕಾಳಿಂಗನ ಮಾಡಿ ಬಿಟ್ಟಳು ಕ್ಷಣದಾಗೆ ।
ಸರಸರಸರ ವಿಷವೇರಿ ಬಿದ್ದನು ಭೂಮಿಮೇಗೆ ॥
ದುರ ದುರ ದುರಾ ನೋಡುತಾನೆ ತನ್ನಯ ತಂಗೀಗೆ ।
ಬಾರೆ ತಂಗಿ ಹೋಗುತಿದೆ ಪ್ರಾಣ ನೀರು ಕೊಡು ಯಿಷ್ಟು ಯನಗೆ ॥

ಆಗಲೂ ಹೆಡಮುರಿ ಕಟ್ಟಿಸಿಕೊಂಡಿರುವ ತಂಗಿಯು ಹರ ಹರಯೆಂದು ತಲೆಚಚ್ಚಿಕೊಂಡು, 'ಯಾರಾದರೂ ನನ್ನ ಕಟ್ಟು ಬಿಚ್ಚಬಾರದೆ' ಎಂದು ಅತ್ತಳು. ಮರೆಮಾಯದಲ್ಲಿ ದೂತರು ಬಂದು ಬಿಚ್ಚಿದರು.

ಗಡ ಗಡ ವೋಡಿಹೋದಳು ಹಳ್ಳದ ಮಡುವೀಗೆ ।
ಭಡ ಭಡ ಭಡ ನೀರು ತುಂಬಿಕೊಂಡು ಬಂದಾಳು ಗಾಬರಾಗೆ ॥
ಕುಡಿ ಕುಡಿ ಕುಡಿ ನೀರಂಣ್ಣಯ್ಯ ನೋಡು ಯನ್ನ ಕಡಿಗೆ ॥

ಅವನು ಆ ವೇಳೆಗೆ ಗತಪ್ರಾಣನಾಗಿದ್ದಾನೆ. ಆಗ ಅವಳು ಯಿನ್ನೂ ಅತ್ತಳು.—

ಕಡು ಪಾಪಿ ನನಗೋಸ್ಕರ ಬಂದು ಮಡಿದೆ ನೀ ವ್ಯರ್ಥದಾಗೆ ।
ವೊಡಿವೆ ವಸ್ತುಯೆಲ್ಲಾ ಕೊಡುವೆ ನಿನಗೆ ಏಳು ಹೋಗುವ ಮನೀಗೆ ॥
ಗಂಡ ಕೇಳಿದರೆ ಏನು ಹೇಳಲಿ ಯಾವ ಸಂತೋಷದೊಳಗೇ ।
ನಿನ್ನ ಸತಿ ತಾಯ್ಗಳು ಕೇಳಿದರೆ ಯೇನ್ಹೇಳಲಿ ಅವರೀಗೆ ।
ಯೆಂದು ದುಃಖ ಮಾಡುತ ಕುಂತಳು ಅಣ್ಣನ ಬಳಿಯಾಗೇ ॥

"ನನಗಾಗಿ ತಂದೆಯ ಮನೆಯು ಹಾಳಾಗಿಹೋಯಿತು. ಹಿರಿಯರ ಹೆಸರಿನಲ್ಲಿ ಜ್ಯೋತಿ ಬೆಳಗುವವರು ಇನ್ನಾರು?" ಎಂದು ಬಹುವಾಗಿ ಗೋಳಿಟ್ಟು ಬೆಟ್ಟದ ಮೇಲಿದ್ದ ಶಕ್ತಿಗುಡಿಗೆ ಹೋದಳು. ಅಲ್ಲಿ ಮಡಿಯುಟ್ಟು ಪಾರ್ವತೀ ಪರಮೇಶ್ವರರಿಗೆ ಪ್ರಾರ್ಥಿಸಿಕೊಂಡು ಕತ್ತಿಗೆ ಗುಂಡಕತ್ತರಿ ಹಾಕಿಕೊಳ್ಳಲು, ಅವರು ಪ್ರತ್ಯಕ್ಷರಾಗಿ "ಏನು ಬೇಕು ಕೇಳಿಕೋ" ಎಂದರು. ಅವಳು, "ನೀ ಕೊಟ್ಟ ಐಶ್ವರ್ಯ ತುಂಬಿದೆ ಶಿವನೆ! ನನ್ನಣ್ಣನನ್ನು ಉಳಿಸಿ ಅಪಕೀರ್ತಿಯೇನೂ ಎನ್ನಮೇಲೆ ಇಲ್ಲದ್ಹಾಂಗೆ ಮಾಡು. ಬೇಡಿಕೊಂಬೆ ನಿಮಗೆ" ಎಂದು ವರ ಬೇಡಿದಳು. "ಅವನು ಪಾಪಿ" ಎಂದರೂ ಕೇಳದೆ, ಅವಳು ಆಗಲೇಬೇಕೆನ್ನಲು ಶಿವ ಪಾರ್ವತಿಯರು ಇವಳ ಭಕ್ತಿಗೆ ಮೆಚ್ಚಿ,—

ಯಿಟ್ಟರಂಣ ನೀರು ಮಂತ್ರಿಸಿ ಆದೇ ಕಲ್ಲಿನ ಮೇಗೆ ।
ತಟ್ಟನೆದ್ದು ಕಾಳಿಂಗನು ಸುಗ್ಗಿ ಹಾರಿಹೋಯ್ತು ಶವದ ಬಳಿಗೆ ।
ಯಿಟ್ಟು ಬಾಯಿ ಕಡಿದಂಥ ಸ್ಥಳಕ್ಕೆ ಶೇದಿಕೊಂಡಿತು ವಿಷವು ಬೇಗೆ ॥

ಬದುಕಿದ ಅಣ್ಣನು ತನ್ನ ದುರ್ವೃತ್ತವನ್ನು ನೆನೆದು ಚಿಂತಿಸಿ, "ನಾನು ಪಾಪ ನಿವಾರಣಕ್ಕಾಗಿ ತೀರ್ಥಯಾತ್ರೆ ಹೊರಟುಹೋಗುವೆನು. ನಾನು ಹೇಗೆ ಊರಿಗೆ ಬರಲಿ?" ಎಂದು ಪಶ್ಚಾತ್ತಾಪಪಟ್ಟನು. ತಂಗಿಯು ಸಮಾಧಾನ ಹೇಳಿ, ನಡೆದುದನ್ನು ತಾನು ಯಾರಿಗೂ ಹೇಳುವುದಿಲ್ಲವೆಂದು ಅಭಯ ಹೇಳಿ, ಅಣ್ಣನ ಜೊತೆಯಲ್ಲಿ ತವರು ಮನೆಗೆ ಹೋದಳು.

ಎಂಟು ದಿನವಿದ್ದು ಅವಳು ಅಣ್ಣನ ಜೊತೆಯಲ್ಲಿ ತಮ್ಮ ಊರಿಗೆ ಬಂದಳು. ಹಿಂದಿನದನ್ನು ನೆನೆದು, ಊರು ಕೊಂಚ ದೂರವಿದೆಯೆನ್ನುವಾಗ ತನ್ನ ಒಡವೆಯನ್ನೆಲ್ಲಾ ತೆಗೆದು ಅಣ್ಣನ ಕೈಗೆ ಕೊಟ್ಟು, ಸೀನಿದನ್ನು ತೆಗೆದುಕೊಂಡು ಹೋಗಿ, "ಕಳ್ಳರಿಗೆ ಸಿಕ್ಕಿದೆವು ಎಂದು ನಾಳೆ ಊರಿನಿಂದ ಒಂದು ಕಾಗದಾ ಬರೆ" ಯೆಂದು ಹೇಳಿ ಕಳುಹಿಸಿಬಿಟ್ಟು, ತಾನು ಊರಿಗೆ ನಡೆದುಕೊಂಡು ಹೋದಳು.

ಗಂಡನು ಮನೆಯ ಬಾಗಿಲಿನಲ್ಲಿಯೇ ಹೆಂಡತಿಯನ್ನು ಕಾಯ್ದು ಕುಳಿತಿದ್ದನು. "ಏಕೆ ಒಬ್ಬಳೇ ಬರುತ್ತಿರುವೆ?" ಎಂದು ಕೇಳಿದ ಗಂಡನಿಗೆ, "ಅಡ್ಡಹಳ್ಳದ ಬಳಿ ಬಂದು ಕಳ್ಳರು ಅಡ್ಡಕಟ್ಟಿಕೊಂಡರು ಅಣ್ಣನ ಬೆನ್ನು ಹತ್ತಿಹೋದರು. ಸಂನ್ನೆ ಮಾಡಲು ಅಣ್ಣನ ಹೋರಿಯು ಅವನ ತಕ್ಕೊಂಡು ಹೋಯ್ತು ಅತ್ತಲಾಗೆ" ಎಂದು ಕಣ್ಣೀರಿಟ್ಟಳು. "ಅಣ್ಣನೇನಾದನೋ ತಿಳಿಯದು" ಎಂದಳಲಿದ ಭಾಮಿನಿಗೆ ಗಂಡನು, "ಭಾಮೈದನು ಬದುಕಿಬಂದರೆ ನಿನ್ನ ಹೆಸರಿನಲಿ ವೂಟ ಬಡಿಸುವೆ ಐದು ನೂರು ಜಂಗಮರಿಗೆ" ಎಂದು ಪರಮೇಶ್ವರನಿಗೆ ಹರಸಿಕೊಂಡು ಸಮಾಧಾನ ಹೇಳಿದನು.

ಬೆಳಕು ಹರಿಯುತ್ತಿದ್ದ ಹಾಗೆಯೇ "ಭಾಮೈದ"ನು ಸುಖವಾಗಿರುವನೆಂದು ಕಾಗದ ಬಂದಿತು. ಗಂಡ ಹೆಂಡಿರು ಆನಂದವಾಗಿ ಹರನ ಪೂಜೆ ಮಾಡಿ ಊಟ ಬಡಿಸಿದರು ಐನೂರು ಜಂಗಮರಿಗೆ.

———

ಹಿಂದಿನಿಂದ:—ಈ ಲೇಖನದಲ್ಲಿ ಬಂದಿರುವ ೩೨ನೆಯ ನಂಬರಿನ ಹರಿಗೋಲು ಹಾಡನ್ನು 'ಕರ್ನಾಟಕದ ಗೆಜಿಟೆಯರ್'ನ ಪರಿಶಿಷ್ಟ ಬ. ದಲ್ಲಿ ಕೊಟ್ಟಿರುವ 'ದುರ್ಗಪ್ಪ ಡ್ಯಾಮಪ್ಪರ ಕಥೆ' ಯೊಡನೆಯೂ, 'Village Gods of South India' ದಲ್ಲಿ ಬಂದಿರುವ ಮಾರಿಯ ಕಥೆಯೊಡನೆಯೂ ಹೋಲಿಸಿರಿ.

## IV. ಕಥೆಗಳು

ಹಾಡುಗಳ ಪ್ರಪಂಚಕ್ಕಿಂತ ಕಥೆಗಳ ಪ್ರಪಂಚವು ದೊಡ್ಡದು. ಹಾಡು ಕಟ್ಟುವುದಕ್ಕಿಂತ ಕಥೆ ಹೇಳುವುದು ಸುಲಭವೆಂದೋ ಹೆಚ್ಚು ಸಹಜವಾದುದೆಂದೋ ಅಂತೂ ಕಥೆಗಳ ಕಂತೆಯು ಹಾಡಿನ ಕಂತೆಗಿಂತ ಹಿರಿದು. ಅದರಿಂದ ಹಾಡುಗಳನ್ನು ಹುಡುಕಬೇಕಾಗಿರುವಂತೆ ಕಥೆಗಳಿಗೆ ಹುಡುಕಬೇಕಾಗಿಲ್ಲ. ಯಾವ ನಾದರೊಬ್ಬನು ತಾನು ಕೇಳಿರುವ ಕಥೆಗಳನ್ನಷ್ಟೇ ಬರೆದರೂ ಅದೇ ಒಂದು ಭಾರಿಯ ಗ್ರಂಥವಾಗುವುದರಲ್ಲಿ ಸಂದೇಹವಿಲ್ಲ.

ಭರತಖಂಡವೇ ಕಥೆಗಳ ಮಾತೃಭೂಮಿಯೆಂದು ಹಲವರು ವಿದ್ವಾಂಸರು ಒಪ್ಪುತ್ತಾರೆ. ಅಲ್ಲವೆನ್ನುವವರೂ ಇದ್ದಾರೆ. ಮಾನವನು ತನ್ನ ಅನುಭವಗಳನ್ನು ಇತರರಿಗೆ ಹೇಳಬೇಕೆಂದುಕೊಂಡಾಗಲೇ, ಇತರರನ್ನು ಒಲಿಸಬೇಕೆಂದು ತನ್ನ ಕಷ್ಟ ನಿಷ್ಟುರಗಳನ್ನು ಸುಖ ದುಃಖಗಳನ್ನು ರಂಗುಕೊಟ್ಟು ಹೇಳಿಕೊಳ್ಳಲು ಆರಂಭಿಸಿದಾಗಲೇ ಕಥೆಗಳು ಹುಟ್ಟಿರಬೇಕು. ಅದರಿಂದ ಕಥೆಗಳು ಸ್ವತಂತ್ರವಾಗಿಯೇ ಹುಟ್ಟಿರಬೇಕಾದರೂ, ಪ್ರತಿಯೊಬ್ಬನ ಮನಸ್ಸೂ ಅವನ ಕುಲದವರ ಮನಸ್ಸಿನಂತೆ, ತನ್ನ ಪರಿಸ್ಥಿತಿ ಸಂಪ್ರದಾಯ ಸಂಸ್ಕೃತಿಗಳಿಗೆ ಅನುಸಾರವಾಗಿ ಪ್ರಕಟವಾಗುವುದರಿಂದ, ಕುಲವನ್ನು ನಾಲಗೆ ಹೇಳುವುದರಿಂದ, ಈ ಕಥಾ ವಾಹಿನಿಯ ಜಾತಿಯನ್ನು ಗೊತ್ತುಮಾಡುವುದು ಸಾಧ್ಯ.

ಈ ವೇಳೆಗಾಗಲೇ ಕನ್ನಡದಲ್ಲಿ ಕಥಾಸರಿತ್ಸಾಗರ, ಪಂಚತಂತ್ರಗಳಂತಹ ಕಲ್ಪಿತ ಕಥೆಗಳೂ, ಪುರಾಣ ಪುಣ್ಯಕಥೆಗಳಂತಹ ಅರ್ಥವಾದದ ಜಾತಿಯ ಕಥೆಗಳೂ, 'ಗೆಜಿಟಿಯರ್'ನಲ್ಲಿ ಬಂದಿರುವ ನಡೆದ, ನಡೆಯಿತೆಂದು ಹೇಳಿಕೊಳ್ಳುವ ಕಥೆಗಳೂ ಅನೇಕವಾಗಿ ಪ್ರಕಟವಾಗಿವೆ. ಇವುಗಳಲ್ಲಿ ಪೆರಿಯಪಟ್ಣದ ಜಗಳ, ಸಂಗಣ್ಣನ ಕಥೆ ಮೊದಲಾದವು—ಲಾವಣಿಗಳಾಗಿ—ಕೋಣಪೇಗೌಡನ ಕಥೆ, ವಾರದ ಕಥೆಗಳು—ಹಾಡುಗಳಾಗಿ—ಎರಡು ಮೂರನೆಯ ಲೇಖನಗಳಲ್ಲಿ ಪ್ರಕಟವಾಗಿವೆ. ಅದರಿಂದ ಇದುವರೆಗೂ ಕರ್ಣಾಕರ್ಣಿಕೆಯಾಗಿ ಉಳಿದಿರುವ, 'ಗೆಜಿಟಿಯರ್' ಮತ್ತು ಶಾಸನಗಳಲ್ಲಿರುವ ಕೆಲವು ಕಥೆಗಳನ್ನು ಮಾತ್ರ ಉದಾಹರಿಸುತ್ತೇವೆ.

ಈ ಕಥೆಗಳನ್ನು ನಾನಾ ವಿಧವಾಗಿ ವಿಭಾಗಿಸಲು ಸಾಧ್ಯ. ಆದರೂ ನಾವು ನಡೆದ ಕಥೆಗಳು, ಪುರಾಣ ಕಥೆಗಳು, ವಿನೋದ ಕಥೆಗಳು ಎಂದು ಮೂರು ವಿಭಾಗ ಮಾಡುವೆವು. ಶಾಸನಾದಿಗಳಲ್ಲಿ, ಗ್ರಂಥಾದಿಗಳಲ್ಲಿ, ನಡೆದವು ಎಂದೇ ಉಲ್ಲೇಖವಿರುವ ಕಥೆಗಳು ಮೊದಲನೆಯ ಜಾತಿ. ಸ್ಥಳಮಾಹಾತ್ಮ್ಯ, ದೇವತಾ ಪ್ರಭಾವಾದಿ

ಕಥೆಗಳು, ಎರಡನೆಯು ಜಾತಿಯ ಪುರಾಣ ಕಥೆಗಳು. ಹೊತ್ತುಕಳೆಯುವ ಉದ್ದೇಶದಿಂದ ಒಬ್ಬರಿಗೊಬ್ಬರು ಹೇಳಿಕೊಳ್ಳುವ ಕಥೆಗಳು ಮೂರನೆಯ ಜಾತಿ.

## (ಅ) ನಡೆದ ಕಥೆಗಳು

### (೧) ಜಗಳದ ಕಥೆ

ಬ್ರಾಹ್ಮಣೇತರರು ನಾವೂ ಬ್ರಾಹ್ಮಣರೆಂದರು. ಬ್ರಾಹ್ಮಣರು ಅಲ್ಲವೆಂದರು. ಇಬ್ಬರಿಗೂ ವ್ಯಾಜ್ಯವಾಗಿ ಅಧಿಕಾರಿಗಳವರೆಗೂ ದೂರು ಮುಟ್ಟಿತು. ಅಧಿಕಾರಿಯು ಬುದ್ಧಿವಂತಿಕೆಯಿಂದ ವಿವಾದವನ್ನು ಪರಿಹರಿಸಿದನು.

ವಾದಿ ಪ್ರತಿವಾದಿಗಳಿಬ್ಬರನ್ನೂ ಆ ಅಧಿಕಾರಿಯು ಒಂದು ದಿನ ಕರೆಯಿಸಿದನು. ಇಬ್ಬರೂ ಬಂದರು. ಅವರಿಬ್ಬರೂ ಹೊರಗಡೆ ಕಾದು ಕುಳಿತಿರಲು, ಆ ತುಂಟ ಅಧಿಕಾರಿಯು "ಬ್ರಾಹ್ಮಣರನ್ನು ಒಳಕ್ಕೆ ಕರೆ" ಎಂದು ಬಾಗಿಲಿನವನಿಗೆ ಅಪ್ಪಣೆಮಾಡಿದನು. ಅವನು "ಬ್ರಾಹ್ಮಣರು ಒಳಕ್ಕೆ ಬನ್ನಿ, ಅಪ್ಪಣೆಯಾಗಿದೆ" ಎಂದು ಕೂಗಿದನು. ಬ್ರಾಹ್ಮಣರು ಒಳಕ್ಕೆ ಬಂದರು. ಇತರರು ಒಳಕ್ಕೆ ಬರಲಿಲ್ಲ. ಅಧಿಕಾರಿಯು ಸುಲಭವಾಗಿ ಆ ಜಗಳವನ್ನು ಹರಿಸಿದನು.

(ಈ ಸಂಗತಿಯು ನಮ್ಮೂರಿನಲ್ಲಿ ನಡೆಯಿತು, ನಮ್ಮೂರಿನಲ್ಲಿ ನಡೆಯಿತು ಎಂದು ಹಲವರು ಹೇಳುತ್ತಾರೆ. ಹಾಗೆಯೇ ಬ್ರಾಹ್ಮಣ್ಯವನ್ನು ಅಪೇಕ್ಷಿಸಿದ ಜಾತಿಗಳೂ ಹಲವು ಎಂದು ವದಂತಿಯುಂಟು.)

### (೨) ದಿವ್ಯ ಸಾಕ್ಷ್ಯ

ಬೆಳಗಾಂ ಜಿಲ್ಲೆಯ ಕಿತ್ತೂರು ಗ್ರಾಮದಲ್ಲಿ "ವೊಂದು ಬಸವಣ್ಣನ ಸಣ್ಣ ಹಳೆ ಗುಡಿಯು ಉಂಟು. ಈ ಗುಡಿಯಲ್ಲಿ ಗೋವೆಯ ಕದಂಬ ಅರಸರು ಸ್ರ್ಗ ೧೧೪೪ರಲ್ಲಿ ಬರಿಸಿದ್ದೊಂದು ಲಿಪಿಯುಂಟು. ಅದರಲ್ಲಿ ಒಂದು ಭೂಮಿಯ ಸಲುವಾಗಿ ಶಿವಶಕ್ತಿ, ಕಲ್ಯಾಣಶಕ್ತಿಯೆಂಬ ಇಬ್ಬರು ಬ್ರಾಹ್ಮಣರಿಗೆ ವಾದ ಹುಟ್ಟಿದ್ದರಿಂದ ಶಿವಶಕ್ತಿಯು ದೇಗಾವಿಯ ಮಹಾಜನ ಸಭೆಯ ಸಮಕ್ಷ ಕಾದ ರಂಟೆಯ ಕುಳವನ್ನು ಕೈಯಲ್ಲಿ ಹಿಡಿದು ದೀವ್ಯಮಾಡಿದ ಲೇಖವಿರುತ್ತದೆ. ಶಿವಶಕ್ತಿಯ ಕೈಯು ಸುಡದಿದ್ದ ಕಾರಣ ಅವನಿಗೆ ಭೂಮಿಯು ದೊರೀತೆಂದು ಲಿಪಿಯು ಹೇಳುತ್ತದೆ.*"

### (೩) ತುರುಗಾದು ಸಗ್ಗಕೇರಿದವರು†

"ಹೊಸಗುಂದದ ಬೊಂಮರ್ಸನವರು ಕೊಡಲಿಯ ಯಿರಿದು ತುರವಕೊಂಡು.... ಹುಯಲ ಹರಿದು ಕಾದಿ ತಳ್ತಿರಿದು....ಸರ್ಗ್ಗಪಾತ್ರರಾದರು. ಅವರ ಪೂರ್ಥ್ವ ಕ್ರಿಯೆಯ ಅವರ ಮಗ ಪಿಳ್ಳೆಯ ನಾಯ್ಕನು ಮಾಡಿ ಶ್ರೀ ಹೊಸ್ಸೇಸ್ವರ ದೇವರ ಸನ್ನಿಧಿಯಲ್ಲಿ ಬೀರಗಲ್ಲ ನಿಲ್ಸಿ......ಗುರುಗಳಿಗೆ ಕಾಲತೊಳೆದು ಧಾರಾಪೂರ್ವಕವಾಗಿ ಕೊಟ್ಟರು......ಅವರ ಸಂತತಿಯನು ನಾವು ತ್ರಿಶುದ್ಧಿಯಿಂದ ನಂಬಿದವರು."

---

* 'ಬೊಂಬಾಯಿ ಕರ್ಣಾಟಕದ ಗೆಜಿಟಿಯರ್' (ವೆಂಕಟರಂಗೋ ಕಟ್ಟಿ), ಪುಟ ೫೦೨.

† ವೀರಗಲ್ಲು—ಶಿವಮೊಗ್ಗೆ ೬೨ನೆಯ ನಂಬರಿನ ಶಾಸನ.

## (೪) ದೇವರು ಮೈತುಂಬುವುದು *

"ಸ್ವಸ್ತಿ ಶ್ರೀ ವಿಜಯಾಭ್ಯುದಯಶಾಲಿವಾಹನ ಶಕ ವರ್ಷಂಗಳು ೧೭೪೦ ನೇ ಸಂದ ವರ್ತಮಾನವಾದ ಬಹುಧಾನ್ಯ ಸಂವತ್ಸರದ ಮಾರ್ಗಶಿರ ಶುದ್ಧ ೬ ಗುರುವಾರದಲ್ಲು ಶ್ರೀಮದ್ರಾಜಾಧಿರಾಜ ಪ್ರಹುಡ ಪ್ರತಾಪ ವೀರನರಪತಿ ಕೃಷ್ಣರಾಜ ವಡೆಯರವರು ಮೈಹಿಸೂರು ನಗರದಲ್ಲು ದಿವ್ಯ ಸಿಂಹಾಸನಾರೂಢರಾಗಿ ಪೃಥ್ವೀ ಸಾಂಬ್ರಾಜ್ಯಂ ಗೈಯ್ಯುತ್ತಿರಲು ಅಷ್ಟಾದಶ ಪೀಠದಲ್ಲಿ ಮುಖ್ಯ ಪೀಠಸ್ತರಾದ ಕೊಲ್ಲಾಪುರೀ ಮಹಾಲಕ್ಷ್ಮಿ ಅಮ್ಮನವರು ಪುಜನಿ ಮಹಾಕಾಳೀ ಅಮ್ಮನವರು ಸಹ ಶೀಮೇ ವಳಗೆ ಮಹೇಶ್ವರಿ ವುಪದ್ರದಿಂದ ವಾಂತಿಬ್ರಾಂತಿಯಾಗಿ ಜನರು ಮೃತವಾಗುತ್ತಯಿದ್ದಲ್ಲು. ಈ ವುತ್ಪಾತ ರೋಗ ನಿವರ್ತ್ಯರ್ಥವಾಗಿ ಈ ಕಣ್ವಪುರೀ ಕ್ಷೇತ್ರದಲ್ಲಿ ಇದ್ದಂಥಾ ನಾಲ್ಕನೇ ವರ್ನದಲ್ಲಿ ಗಂಗಡಿಕಾರಲ್ಲಿ ಜನಿಸಿದ ಬೋಗೆಗೌಡನ ಪೌತ್ರನಾದ ಮರಿನಂಜೇಗೌಡನ ಪುತ್ರನಾದ ಬೋಗೆಗೌಡನ ಪತ್ನಿ ತಿಮ್ಮಮ್ಮನ ಪುತ್ರಿಯಾದ ನಂಜಮ್ಮಯಂಬ ಕರ್ನಿಕೆ ಮೇಲೆ ಶ್ರೀ ಅಮ್ಮನವರು ಆವಿರ್ಭವಿಸಿ ಬ್ರಂಹ ಕ್ಷತ್ರಿ ವೈಶ್ಯ ಶೂದ್ರ ನಾಲ್ಕು ವರ್ನದಲ್ಲು ಮನಸಾ ಭೀಷ್ಟಗಳು ಆಗಿ ರೋಗಾದ್ಯುಪದ್ರಗಳು ಪರಿಹರವಾದ್ದರಿಂದ ಶೀಮೆಗಳ ಮೇಲೆ ಬಂದ ಕಾಣಿಕೆಯಲ್ಲಿ ನಂಜಯನು ಯಿ ಕನ್ನಂಬಾಡಿ ಗ್ರಾಮ ಮಧ್ಯದಲ್ಲಿ ನೂತನವಾಗಿ ದೇವ ಸ್ತಾನವನ್ನು ಕಟ್ಟಿಶಿ ಅವತಾರ ಭೇದವಾಗಿ ಭೂತಗಣಕ್ಕೆ ಅಧಿಷ್ಟಾನ ದೇವತೆಯಾದ ಮಹಾಕಾಳಿ ಅಂಮನವರು ಮಹಾಲಕ್ಷ್ಮೀದೇವೀ ಅಮ್ಮನವರು ಸರಸ್ವತೀ ಅಮ್ಮನವರು ಪರಿವಾರ ಸಮೇತವಾಗಿ ಪ್ರತಿಷ್ಠೆಮಾಡಿಸಿ ಯಿದೆ......"

## (೫) ದೆವ್ವಗಳ ಕಥೆಗಳು †

ಈ ಕೆಳಗಿನ ದೃಷ್ಟಾಂತಗಳನ್ನು ಶೋಧಕರು ಸ್ವಾನುಭವದಿಂದ ಬರೆದಿದ್ದಾರೆ.—"೩. ಕೊಲ್ಲಾಪುರದಲ್ಲಿ ರಾಮನೆಂಬ ಪೋಲೀಸ ಶಿಪಾಯಿಯ ಹೆಂಡತಿಯಾದ ಸೀತಾಯೆಂಬ ೩೫ ವರ್ಷದ ಹೆಂಗುಸು ವೊಂದುದಿನ ವೊಂದು ಕೆರೆಯ ದಂಡೆಯ ಮೇಲೆ ಕುರುಳಿನ ಬುಟ್ಟಿಯನ್ನು ಹೊತ್ತುಕೊಂಡು ಹೋಗುವಾಗ ಜಾರಿಬಿದ್ದಳು. ಆದರೂ ಸೀತಾನು ಲಗುಬಗಿಯಿಂದ ಯೆದ್ದು ಕುರುಳುಗಳನ್ನು ಕೂಡಿಸಿಕೊಂಡು ತಕ್ಕೊಂಡು ಮನೆಗೆ ಹೋದಳು. ತಾನು ಬಿದ್ದದ್ದರಿಂದ ಬಹಳ ಹೆದರಿಕೆ ಬಂತೆಂದು ಮನೆಯವರಿಗೆ ತಿಳಿಸಿದಳು. ಮುಂದೆ ನಾಲ್ಕೈದು ದಿವಸದ ಮೇಲೆ ಯಾರೋ ಬಾಗಿಲಲ್ಲಿ ನಿಂತು ಸೀತಾ, ಸೀತಾ ಯೆಂದು ವೊದರಿದ ಹಾಗೆ ಆಕೆಗೆ ಕೇಳಿಸಿತು; ಆದರೆ ಬಾಗಿಲಲ್ಲಿ ನೋಡಿದರೆ ಯಾರೂ ಇದ್ದಿಲ್ಲ. ಮುಂದೆ ಮತ್ತೂ ಹಾಗೆ ಒದರಿದ ಧ್ವನಿ ಕೇಳಿಸಿತು. ಇದೇ ಪ್ರಕಾರ ಕೆಲವು ದಿವಸ ವೊದರುವ ಕ್ರಮ ನಡೀತು. ಒಮ್ಮೊಮ್ಮೆ ಬಾಗಿಲಿನ ಬಳಿಯಲ್ಲಿ ಇರುವ ಸಣ್ಣ ಕಿಟಿಕೆಯಲ್ಲಿ ಮನುಷ್ಯನ ಮೋರೆಯ ಹಾಗೆ ಆಕೆಗೆ ಕಾಣಿಸುವುದು. ಅದರಿಂದ ಆಕೆ ಬಹಳ ಹೆದರಿ ಗಂಡನಿಗೆ ಮೇಲೆಮೇಲೆ ಈ ಸಂಗತಿಯನ್ನು ಹೇಳುವಳು. ಒಂದು ದಿನ ಗಂಡನು ಯೇನಿದೆ ನೋಡಬೇಕೆಂದು ಮನೆಯಲ್ಲಿ ನಿಂತನು. ಅವನಿಗೂ ಬಾಗಿಲಿನಲ್ಲಿ ಸೀತಾ ಸೀತಾ ಯೆಂದು ವೊದರಿದ್ದು ಕೇಳಿಸಿದ್ದಲ್ಲದೆ ಕಿಟಿಕೆಯಲ್ಲಿ ಮನುಷ್ಯನ ಆಕಾರವೂ ಕಾಣಿಸಿತು. ರಾಮನು ಗೋಡೆಗಳಿಗೂ ನೆಲಕ್ಕೂ

---

* ಕೃಷ್ಣರಾಜಪೇಟೆ ತಾಲ್ಲೋಕು ಕನ್ನಂಬಾಡಿ ಗ್ರಾಮದ ಮಹಾಲಕ್ಷ್ಮೀ ದೇವಸ್ಥಾನದ ಉತ್ತರ ಭಾಗದ ಗೋಡೇಕಲ್ಲಿನಲ್ಲಿದ್ದ ಶಾಸನ.

† 'ಬೊಂಬಾಯಿ ಕರ್ನಾಟಕದ ಗೆಜಿಟಿಯರ್,' ಪರಿಶಿಷ್ಟ ಬ, ಭೂತ ಬಾಧೆ.

ಗೋಮೂತ್ರವನ್ನು ಶಿಡಿಸಿ, ಮಂತ್ರಿಸಿದ ಬೂದಿಯನ್ನು ಮನೆಯೊಳಗೆ ಎಲ್ಲ ಕಡೆ ಚಲ್ಲಿದನು. ಆದರೆ ಅದರಿಂದ ಉಪಯೋಗವೇನೂ ಆಗಲಿಲ್ಲ. ಸೀತಾನು ಬಸುರಿದ್ದಳು. ಆಕೆ ಹಡಿಯುವವರೆಗೆ ಇದೇ ಪ್ರಕಾರ ಪೊದರುವ ಕ್ರಮ ನಡಿದಾಗ್ಯೂ, ಹಡಿದು ೧೫ ದಿವಸದ ವರೆಗೆ ಆಕೆಗೆ ಯೇನು ಬಾಧೆಯಾಗಲಿಲ್ಲ. ೧೬ ನೇ ದಿವಸ ಆಕೆ ಮೂರ್ಛಿತಳಾಗಿ ಹೊರಸಿನ ಮೇಲೆ ಹೂ, ಹೂ ಯೆಂದು ನರಳುತ್ತ ಬಿದ್ದುಕೊಂಡಳು; ಕೂಸು ತಕ್ಕೊಳ್ಳುವ ಅರಿವು ಉಳಿಯಲಿಲ್ಲ, ಕೈಕಾಲುಗಳು ಶಟಿದುವು. ಔಷಧಗಳನ್ನು ಕೊಟ್ಟು ನೋಡಿದರೆ ಅವುಗಳಿಂದ ಪ್ರಯೋಜನವೇನು ಆಗಲಿಲ್ಲ. ಕಡೆಯಲ್ಲಿ ಆಕೆಗೆ ದೆವ್ವ ಬಡಿದದೆಯೆಂದು ಮನಗಂಡು, ಆಕೆಯ ಗಂಡನು ಕೃಷ್ಣನೆಂಬ ಗೊರವ ಜಾತಿಯ ಮಾಂತ್ರಿಕನನ್ನು ಕರೆಕೊಂಡು ಬಂದನು. ಆ ಗೊರವನು ಬೆಂಕಿಯನ್ನು ತರಿಸಿ ಊದು ಹಾಕಿ, ಅದರ ಹೊಗೆಯ ಮೇಲೆ ಸೀತಾನ ಮೋರೆಯನ್ನು ಹಿಡಿದು ಮಂತ್ರವನ್ನು ಉಚ್ಚರಿಸಲಾಗಿ ಸೀತಾನ ಮೈಯಲ್ಲಿ ದೆವ್ವಿನ ಸಂಚಾರವಾಗಿ ಅದು ಹಿಂದುಸ್ತಾನೀ ಭಾಷೆಯಿಂದ "ನಾನು ಹೋಗುವುದಿಲ್ಲ. ಈಕೆ ನನಗೆ ಬೇಕೆ"ಂದು ಹೇಳಿತು. ತರುವಾಯ ಗೊರವನು ಯೆರಡು ಕಾಗದಗಳ ಮೇಲೆ ವೇತಾಳನ ಆಕೃತಿಯನ್ನು ಬರೆದು ಮಂತ್ರಿಸಿ ಸುಟ್ಟು, ಅವುಗಳ ಹೊಗೆಯನ್ನು ಸೀತಾನಿಗೆ ಕೊಡಲಾಗಿ ದೆವ್ವ ಧೈರ್ಯಗುಂದಿ ಮಾಂತ್ರಿಕನಿಗೆ ಹೇಳಿದ್ದೇನೆಂದರೆ—"ನೀನು ಇನ್ನು ಮಂತ್ರಪ್ರಯೋಗ ಮಾಡಬೇಡ. ನಾನು ಈಕೆಯನ್ನು ಬಿಡುತ್ತೇನೆ. ನಾನು ಪರದೇಶೀ ಶಿಪಾಯಿಯು. ೨೭ ನೇ ರೆಜಮೆಂಟಿನಲ್ಲಿ ಇದ್ದೆನು. ಆ ರೆಜಮೆಂಟು ಬಂಡಾಯ ಮಾಡಿದಾಗ ಸರಕಾರದವರು ನನ್ನನ್ನು ಕೊಲ್ಲಿಸಿದರು. ಈಕೆ ಕೆರೆಯ ದಂಡೆಯ ಮೇಲೆ ಹೋಗುವಾಗ ನೋಡಿ ಈಕೆಯ ಮೇಲೆ ನನ್ನ ಇಚ್ಛೆಯಾದ್ದರಿಂದ ಈಕೆಯನ್ನು ಯೆಡವಿಸಿ ಕೆಡಹಿದೆನು. ಅಂದಿನಿಂದ ಈಕೆಯ ಬಾಗಿಲಲ್ಲಿ ಬಂದು ಪೊದರುತ್ತಿದ್ದೆನು. ಇನ್ನುಮೇಲೆ ಈಕೆಯ ಮೈಯಲ್ಲಿ ನಾನು ನಿಲ್ಲುವುದಿಲ್ಲ, ಹೋಗುತ್ತೇನೆ. ಅನ್ನ, ಗೋಧಿರೊಟ್ಟಿ, ತುಪ್ಪ, ಬಾಳೇಹಣ್ಣು ಹಾಕಿ ಯೆಡೆಮಾಡಿ ಈಕೆ ಬಿದ್ದ ಸ್ಥಳದಲ್ಲಿ ಇಡಿಸು. ಅಂದರೆ ಹೊರಟುಹೋಗುತ್ತೇನೆ." ಇಷ್ಟು ಮಾತಾಡಿದ ಬಳಿಕ ಸೀತಾನು ಯೆದ್ದು ಬಾಗಿಲನ ಹೊರಗೆ ಹೋಗಿ ನೆಲಕ್ಕೆ ತಲೆಯೂರಿದಳು. ಆದರಿಂದ ದೆವ್ವ ಹೊರಟುಹೋಗಿ ಆಕೆಗೆ ಸ್ಮೃತಿ ಬಂತು. ತರುವಾಯ ಗೊರವನು ನಾಲ್ಕು ಲಿಂಬೇಹಣ್ಣು ತರಿಸಿ ಮಂತ್ರಿಸಿ ಪೊಂದು ಸೀತಾನ ಶೆರಗಿನಲ್ಲಿ ಕಟ್ಟಿ, ಉಳಿದ ಮೂರು ಮನೆಯ ಮೂರು ಬಾಗಿಲುಗಳ ಮುಂದೆ ಹುಗಿದು ಸೀತಾನು ಪೂರಾ ನೆಟ್ಟಗಾಗುವ ವರೆಗೆ ಶೆರಗಿನೊಳಗಿನ ಹಣ್ಣು ಬಿಚ್ಚಬೇಡಿರೆಂದು ಹೇಳಿ ಹೊರಟುಹೋದನು. ರಾಮನು ದೆವ್ವ ಹೇಳಿದಂತೆ ಬಲಿಕೊಟ್ಟ ಬಳಿಕ ಸೀತಾನು ಮೂರು ನಾಲ್ಕು ದಿನದೊಳಗಾಗಿ ನೆಟ್ಟಗಾದಳು."

ಈ ಮೇಲೆ ಉದಾಹರಿಸಿರುವ ಕಥೆಗಳಂತಹವು ನೂರಾರನ್ನು ಬಲ್ಲವರು ಅನೇಕರುಂಟು. ಇವುಗಳ ಜೊತೆಗೆ ಭಕ್ತರ ಪವಾಡಗಳು, ದೇವರ ಕಥೆಗಳು, ಅನೇಕ ಸಹಸ್ರವಿವೆ.

ಈ ಕಥೆಗಳಲ್ಲಿ ನಾವು ಕಾಣುವುದೇನು? "ಬ್ರಾಹ್ಮಣೇತರರಿಗೆ ತಾವೂ ಬ್ರಾಹ್ಮಣರಾಗಬೇಕೆಂಬ ಆಸಕ್ತಿ ಮೊದಲನೆಯದರಲ್ಲಿ. ಎರಡನೆಯದರಲ್ಲಿ ಧರ್ಮಶಾಸ್ತ್ರಗಳಲ್ಲಿ ಹೇಳಿರುವ ದಿವ್ಯ ಸಾಕ್ಷ್ಯದ ಉದಾಹರಣೆ. ಮೂರನೆಯದರೊಡನೆ ವೇದದಲ್ಲಿ ಹೇಳುವ ಹಸು ಬಿಡಿಸಿಕೊಂಡು ಬರುವ ಕಥೆಗಳನ್ನು ಹೋಲಿಸಿರಿ. ನಾಲ್ಕನೆಯ

ಐದನೆಯ ಕಥೆಗಳಲ್ಲಿ ಕಾಣುವ, "ಮನುಷ್ಯನ ಸುತ್ತಲೂ ಉಪಕಾರಕಾರಕಗಳೂ ಉಪದ್ರವಕಾರಕಗಳೂ ಆದ ಅದೃಷ್ಟ ಶಕ್ತಿಗಳು ಬೇಕಾದಹಾಗೆ ಇವೆ. ಅವು ಕಾಲ ದೇಶ ವರ್ತಮಾನಕ್ಕೆ ಅನುಗುಣವಾಗಿ ವ್ಯಕ್ತವಾಗುವುವು. ಅವೂ ಮನುಷ್ಯರೂ ಪರಸ್ಪರ ಸಂಬದ್ಧಗಳು" ಎಂಬುವ ಸಿದ್ಧಾಂತದ *ನಿದರ್ಶನಗಳನ್ನು ಗಮನಿಸಿರಿ.

## (೬) ಫಕೀರಸ್ವಾಮಿಯ ಕಥೆ†

"ಗದಗಿನ ಬಳಿಯಿರುವ 'ಶಿರಟ್ಟಿ'ಯಲ್ಲಿ ಫಕೀರಸ್ವಾಮಿಯ ಮಠವಿರುತ್ತದೆ. ..........ಈತನ ಕಥೆಯನ್ನು ಜನರು ಹೇಳುವುದು ಹ್ಯಾಗೆಂದರೆ—ಒಬ್ಬ ಲಿಂಗವಂತರ ಹುಡುಗನು ಶಿರಟ್ಟಿಯ ಊರ ಹೊರಗೆ ಈಗ ಮಠ ಇರುವ ಸ್ಥಳದಲ್ಲಿ ಮರದ ಕೆಳಗೆ ಹುಚ್ಚನಹಾಗೆ ಇರುತ್ತಿದ್ದನು: ಊರ ಮುಂದಿನ ಹಳ್ಳದ ನೀರೊಳಗೆ ಆಡುತ್ತ ಕೂಡ್ರುವನು. ಒಂದಾನೊಂದು ದಿವಸ ಊರೊಳಗೆ ಲಿಂಗವಂತರು ದೊಡ್ಡ ಪ್ರಯೋಜನ ವನ್ನು ಮಾಡಿರಲಾಗಿ ದೊಡ್ಡ ದೊಡ್ಡ ಶೆಟ್ಟರು ಊಟಕ್ಕೆ ಕೂಡ್ರುವ ಪೂರ್ವದಲ್ಲಿ ಈ ಹುಚ್ಚು ಹುಡುಗನು ಊಟಕ್ಕೆ ಹಾಕಿರೆಂದು ಹೋದನು. ಆದರೆ ಇವನು ಜಾತಿಭ್ರಷ್ಟ ನಿರುತ್ಸಾನೆಂದು ಹೇಳಿ ಲಿಂಗವಂತರು ಇವನನ್ನು ಹೊಡಿದು ಹೊರಗೆ ಹಾಕಿದರು. ಹುಡುಗನು ಅಳುತ್ತಾ ಹಳ್ಳದೊಳಗೆ ಹೋಗಿ ಕೂತನು. ತರುವಾಯ ಲಿಂಗವಂತರು ಊಟಕ್ಕೆ ಕೂಡ್ರುವಾಗ ತಮ್ಮ ಕೊರಳಲ್ಲಿಯ ಲಿಂಗಗಳನ್ನು ನೈವೇದ್ಯ ಕೊಡಲಿಕ್ಕೆ ತೆಗಿಯ ಹೋಗಲು ವೊಬ್ಬನ ಕೊರಳಲ್ಲಿಯೂ ಲಿಂಗವಿದ್ದಿಲ್ಲ. ಎಲ್ಲರೂ ಚಕಿತರಾದರು. ಕಡೆಯಲ್ಲಿ ಹುಚ್ಚು ಹುಡುಗನನ್ನು ಬಡಿದು ಹೊರಗೆ ಹಾಕಿದ್ದರಿಂದ ಹೀಗಾಯಿತೆಂದು ತಿಳಿದು ಅವರೆಲ್ಲರು ಹುಡುಗನನ್ನು ಹುಡುಕುತ್ತ ಹೊರಟರು. ಹುಡುಗನು ಹಳ್ಳ ದೊಳಗೆ ದೊರೆದ ಬಳಿಕ ಯೆಲ್ಲರೂ ಅವನಿಗೆ ಸಾಷ್ಟಾಂಗ ಹಾಕಿ ಮನ್ನಿಸೆಂದು ಬಹಳ ಪರಿಯಿಂದ ಬೇಡಿಕೊಂಡರು. ಆಗ ಹುಡುಗನು ಸಂತುಷ್ಟನಾಗಿ ತಾನು ತೆಗೆದದ್ದೊಂದು ವೊರತಿಯೊಳಗೆ ವೊಬ್ಬೊಬ್ಬನೇ ಕೈಹಾಕಿ ನಿಮ್ಮ ನಿಮ್ಮ ಲಿಂಗಗಳನ್ನು ಹುಡುಕಿಕೊಳ್ಳಿ ರೆಂದು ಹೇಳಿದನು. ಅವರು ಹಾಗೆಮಾಡಲು ಅವರವರ ಲಿಂಗಗಳು ತಪ್ಪದೇ ಅವರವರಿಗೆ ದೊರಿದವು."

ಈ ಕಥೆಯನ್ನು ಐತರೇಯ ಬ್ರಾಹ್ಮಣದಲ್ಲಿ ಬರುವ "ಸರಸ್ವತೀ ತೀರದಲ್ಲಿ ಋಷಿಗಳು ಯಾಗಮಾಡುತ್ತಿದ್ದರು. ಐಲೂಷನು ಹೋಗಿ ನನ್ನನ್ನೂ ಸೇರಿಸಿಕೊಳ್ಳಿರಿ ಎಂದನು. ಋಷಿಗಳು 'ನೀನು ಶೂದ್ರನು. ಹೋಗು' ಎಂದು ನೂಕಿದರು. ಐಲೂಷನು ಹೊರಟುಹೋದನು. ಋಷಿಗಳು ಮತ್ತೆ ಯಾಗಮಾಡಲು ಕುಳಿತಾಗ ದೇವರುಗಳು ಇರಲಿಲ್ಲ. ಆಗ ಅವರು ಗಾಬರಿಪಟ್ಟು ಅವನನ್ನು ಹುಡುಕಿಕೊಂಡು

---

* ಹೀಗೆ "ಪ್ರಪಂಚವೆಲ್ಲವೂ ಶಕ್ತಿಮಯವಾಗಿದೆ. 'ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ' ಕಂಡಿರುವುದೆಲ್ಲ ಕಾಲುಪಾಲು, ಕಾಣದೆ ಅಮೃತದಲ್ಲಿರುವುದು ಮುಕ್ಕಾಲುಪಾಲು" ಎಂಬ ಮತವನ್ನು ಕೆಲವರು 'Animism' ಎಂದು ಕರೆದು ಅದನ್ನು ಮತಗಳಲ್ಲೆಲ್ಲಾ ಬಹು ರೂಕ್ಷವಾದುದೆಂದು ಅಭಿಪ್ರಾಯಪಡುತ್ತಾರೆ. ಆದರೆ ಉಪನಿಷನ್ಮತದ ದೃಷ್ಟಿಯಿಂದ ಅತೀಂದ್ರಿಯ ಪ್ರಪಂಚ ಜ್ಞಾನವು ಐಹಿಕ ಜ್ಞಾನಕ್ಕಿಂತ ಉತ್ತಮವಾದುದು.

† "ಕರ್ಣಾಟಕ ಗೆಜಿಟಿಯರ್," ಪುಟ ೬೩೧: "ಫಕೀರಸ್ವಾಮಿಯ ಜಾತ್ರೆಯು ವೈಶಾಖ ಪೂರ್ಣಿಮೆಯಲ್ಲಿ ಆಗುತ್ತದೆ. ಅದರಲ್ಲಿ ೩೫,೦೦೦ ಜನ ಕೂಡುತ್ತದೆ."

ಹೋಗಿ ಅವನನ್ನು ಪ್ರಸನ್ನನಾಗಿ ಮಾಡಿ ಕರೆದುಕೊಂಡು ಬಂದರು. ಆಗ ದೇವತೆಗಳೂ ಬಂದರು.'' ಎಂಬ ಕವಷ ಐಲೂಷನ ಕಥೆಯೊಡನೆ ಹೋಲಿಸಿರಿ.

(ಐತರೇಯ ಬ್ರಾಹ್ಮಣದ ಕಥೆಯಲ್ಲಿ ತೋರಿಬರುವ ಉತ್ತಮರೆಂದುಕೊಂಡಿರುವವರು ತಮ್ಮ ಭಾವನೆಯಲ್ಲಿ ಕೀಳಾದವರನ್ನು ಸೇರಿಸಲು ಹಿಂದೆಗೆಯುವುದು, ತನ್ನ ಸಿದ್ಧಿಯನ್ನು ತೋರಿಸಿದ ಮೇಲೆ ತಿರಸ್ಕೃತನಾದವನನ್ನು ಪುರಸ್ಕರಿಸಿ ತಮಗೆ ಸಮಾನನೆಂದುಕೊಳ್ಳುವುದು, ಇದಿಷ್ಟೂ ಇಲ್ಲಿಯೂ ಇದೆ. ಅಲ್ಲವೆ?)

(೭) ಕನಕದಾಸರ ಕಥೆ

ವ್ಯಾಸರಾಯರ ಅಪ್ಪಣೆಯಿಂದ ಕನಕನು ಕೃಷ್ಣನನ್ನು ಊಟಕ್ಕೆ ಬರಹೇಳಿದನು. ರಾಯರು ನೈವೇದ್ಯಮಾಡುತ್ತಿರುವಾಗ ದಾಸನ ಪ್ರಾರ್ಥನೆಯಂತೆ ಸ್ವಾಮಿಯು ನಾಯಾಗಿ ಬಂದು ಆಚಾರಪರರಾದ ಶಿಷ್ಯರ ಪ್ರಹಾರಗಳನ್ನು ಲೆಕ್ಕಿಸದೆ ನುಗ್ಗಿಹೋಗಿ ಒಂದು ಹೋಳಿಗೆಯನ್ನು ಹೊತ್ತುಕೊಂಡೇ ಹೊರಟುಹೋದನು. ಆ ಗುಟ್ಟನ್ನು ಅರಿತ ಕನಕನು ಸ್ವಾಮಿಗಾದ ಬವಣೆಯನ್ನು ನೋಡಿ ಕನಿಕರಪಟ್ಟು ತನ್ನಿಂದ ಹೀಗಾಯಿತೆಂದು ಮರುಕಪಟ್ಟು,

ಮೋಟು ಬಾಲದ ನಾಯಕರೇ । ನೀವು ಏನೇನೂಟಮಾಡಿದಿರಿ ॥ ಪ ॥

ಹುಗ್ಗಿ ತೊಳೆಸುವಲ್ಲಿಗೆ ಹೋಗಿ ತಗ್ಗಿ ಬಗ್ಗಿ ನೋಡಿದಿರಿ ॥
ಹುಗ್ಗಿ ತೊಳೆಸುವ ಸೌಟಲಿ ಬಡಿದರೆ ಕುಯ್ ಕುಯ್ ರಾಗ ಪಾಡಿದಿರಿ ॥ ೧ ॥

ಎಂದು ಮುಂತಾಗಿ ಹಾಡಿ, ಆತನ ಘಾಸಿಯನ್ನು ತಾನು ವಹಿಸಿದನು.

ಇದರೊಡನೆ ಪುರಂದರ ದಾಸರ ''ಮುಯ್ಯಿಗೆ ಮುಯ್ಯಿ ತೀರಿತು'' ಎಂಬ ಹಾಡಿನ ಹಿಂದಿರುವ ಕಥೆಯನ್ನೂ ಅಚ್ಯುತ ದಾಸರ ಕಥೆಯನ್ನೂ ಹೋಲಿಸಿರಿ.

(೮) ದೈವ ಮಾನುಷ ಸಂಬಂಧ

(೧) ಬಿಳಿಗಿರಿ ರಂಗಸ್ವಾಮಿಯು ಸೋಲಗಿತ್ತಿಗೆ ಮನಸೋತು ಅವಳನ್ನು ಮದುವೆಮಾಡಿಕೊಂಡು ಅಲ್ಲಿಯೇ ನಿಂತನಂತೆ. ಈಗಲೂ ರಂಗಪ್ಪನು ಸೋಲಿಗರಿಗೆ ಭಾವ.

(೨) ಮೇಲುಕೋಟೆಯ ಚಲುವರಾಯಸ್ವಾಮಿಯು ಬೀಬಿ ನಾಚ್ಚಿಯಾರಳನ್ನು ಒಲಿಸಿಕೊಂಡು ಅವಳಿಗೆ ಮುಕ್ತಿಯನ್ನು ಕೊಟ್ಟನಂತೆ.

ಇಂತಹ ಕಥೆಗಳು ನಮ್ಮ ನಾಡಿನಲ್ಲಿ ಅದೆಷ್ಟು ಸಹಸ್ರವಿವೆಯೋ ತಿಳಿಯದು. ಏಳನೆಯ ಎಂಟನೆಯ (೧, ೨) ಕಥೆಗಳಲ್ಲಿರುವ ''ದೈವವು ಮನುಷ್ಯಲೀಲೆಯಾಡುವುದು, ಮಾನವಿಯರಿಗೆ ಪತಿಯಾಗುವುದು ಮೊದಲಾದ ಸಂದರ್ಭಗಳು ವೈದಿಕ ಸಾಹಿತ್ಯದಲ್ಲಿ ಅಲ್ಲದೆ ಇನ್ನೆಲ್ಲಿಯೂ ಇಲ್ಲ. ಇದು ಆ ಸಂಸ್ಕೃತಿಯ ಲಕ್ಷಣ'' ಎಂದು ನಮ್ಮ ನಂಬಿಕೆ.

## (ಆ) ಪುರಾಣ ಕಥೆಗಳು

ಈ ಕಥೆಗಳನ್ನೂ ಜನಸಾಮಾನ್ಯರು ನಡೆದ ಕಥೆಗಳೆಂದೇ ಭಾವಿಸುತ್ತಾರೆ. ನದಿಗಳು, ಕ್ಷೇತ್ರಗಳು, ದೇವಸ್ಥಾನಗಳು ಇವುಗಳನ್ನು ಕೇಂದ್ರೀಕರಿಸಿ ಹುಟ್ಟಿದವು ಈ ಕಥೆಗಳು. ಈ ಕಥೆಗಳ ವಸ್ತುವಾಗಿರುವ ಅಲೌಕಿಕ ವಿಷಯಗಳನ್ನು ಹೈತುಕರು ನಂಬುವುದಿಲ್ಲ.

### (೯) ಅಗಸ್ತ್ಯೇಶ್ವರನ ಮಾಹಾತ್ಮ್ಯ

ತಿರುಮಕೂಡ್ಲಿನ ಅಗಸ್ತ್ಯೇಶ್ವರ ಸ್ವಾಮಿಯ (ಲಿಂಗ) ತಲೆಯ ಮೇಲೆ ಒಂದು ತೂತು ಇದೆ. ಅಲ್ಲಿ ಯಾವಾಗಲೂ ಒಂದು ಉದ್ಧರಣೆ ನೀರು ಇರುತ್ತದೆ. ಆ ಲಿಂಗವು ಶ್ರೀರಾಮ ಪ್ರತಿಷ್ಠೆಯಂತೆ. ಶ್ರೀರಾಮನು ಕಪಿಲಾ ಕಾವೇರೀ ಸಂಗಮದಲ್ಲಿ ಶಿವಲಿಂಗ ಪ್ರತಿಷ್ಠೆ ಮಾಡಬೇಕೆಂದುಕೊಂಡನಂತೆ. ಒಂದು ಲಿಂಗವನ್ನು ತರಲು ಹನುಮಂತನನ್ನು ನರ್ಮದೆಗೆ ಕಳುಹಿದನು. ಹನುಮಂತನು ಲಿಂಗವನ್ನು ಹುಡುಕುತ್ತಿದ್ದುದರಿಂದ ಬರುವುದು ಕೊಂಚ ತಡವಾಯಿತು. ಶ್ರೀರಾಮನು ಲಗ್ನದ ವೇಳೆಯು ಮೀರುವುದೆಂದು ಮರಳಿನಲ್ಲಿ ಒಂದು ಲಿಂಗವನ್ನು ಮಾಡಿ ಅದರಲ್ಲಿಯೇ ಪ್ರಾಣಪ್ರತಿಷ್ಠೆ ಮಾಡಿದನು. ಕೊಂಚ ಹೊತ್ತಿನೊಳಗಾಗಿ ಬಂದ ಹನುಮಂತನು ತನ್ನ ಪ್ರಯತ್ನವು ವಿಫಲವಾದುದನ್ನು ಕಂಡು ನಿರಾಶನಾಗಲು ಶ್ರೀರಾಮನು 'ಆ ಲಿಂಗವನ್ನು ತೆಗೆದುಹಾಕಿ ನೀನು ತಂದಿರುವ ಲಿಂಗವನ್ನು ಪ್ರತಿಷ್ಠಿಸು' ಎಂದನು. ಹನುಮಂತನು ಎಷ್ಟು ಪ್ರಯತ್ನಪಟ್ಟರೂ ಆ ಲಿಂಗವನ್ನು ಕೀಳಲು ಆಗಲಿಲ್ಲ. ಆಗ ರೇಗಿ ಅದರ ಮೇಲೆ ಮುಷ್ಟಿಯಿಂದ ಹೊಡೆದನು. ಆ ಘಾತದಿಂದ ಅಲ್ಲಿ ಹಳ್ಳವಾಯಿತು. ಆಗ ಹನುಮಂತನು ತನ್ನ ತಪ್ಪನ್ನು ತಿಳಿದು ಕ್ಷಮಾಯಾಚನೆ ಮಾಡಲು ಶ್ರೀರಾಮನು ಆ ಹಳ್ಳದಲ್ಲಿ ಗಂಗೆಯು ವಾಸವಾಗಿರುವಂತೆಯೂ, ಹನುಮಂತನು ತಂದ ಲಿಂಗವನ್ನು ದರ್ಶನಮಾಡಿದ ಹೊರತು ಅಗಸ್ತ್ಯೇಶ್ವರ ದರ್ಶನ ಪುಣ್ಯವು ಸಾಂಗವಾಗದಂತೆಯೂ ವರವನ್ನು ಕೊಟ್ಟನು.

### (೧೦) ಗರುಡನು ಬರುವುದು

(೧) ಹಿಮವದ್ಗೋಪಾಲ ಸ್ವಾಮಿಯ ಬೆಟ್ಟದಲ್ಲಿ ತೀರ್ಥಸ್ನಾನದ ದಿನ ಗರುಡನು ಬಂದು ನೀರು ಮುಟ್ಟಿ ಹೋಗುತ್ತದೆ. ಉಳಿದ ದಿವಸಗಳಲ್ಲಿ ಅಲ್ಲಿ ಕ್ಷೇಮಕಾರಿಯ ದರ್ಶನವಾಗುವುದಿಲ್ಲ. ಆ ತೀರ್ಥಸ್ನಾನದ ದಿನ ಕೊಳದ ಸುತ್ತಲೂ ಜನರಿರುತ್ತಾರೆ. ಕೊಂಬು ಜಾಗಟೆ ಶಂಖಗಳು ಮೊಳಗುತ್ತಿರುತ್ತವೆ.

(೨) ಸುಬ್ರಹ್ಮಣ್ಯ ಕ್ಷೇತ್ರದಲ್ಲಿ ರಥೋತ್ಸವದ ದಿನ ಕ್ಷೇಮಕಾರಿಯು ಬಂದು ಸುಬ್ರಹ್ಮಣ್ಯೇಶ್ವರನ ರಥಕ್ಕೆ ಪ್ರದಕ್ಷಿಣಮಾಡಿ ಹೋಗುವುದು. ಅದುವರೆಗೂ ರಥವನ್ನು ಎಳೆಯುವುದಿಲ್ಲ.

### (೧೧) ಎಡತೊರೆಯ ಮಹಿಮೆ

ಎಡತೊರೆಯಲ್ಲಿರುವ ಅರ್ಕೇಶ್ವರ ಲಿಂಗವು ಸೂರ್ಯ ಪ್ರತಿಷ್ಠೆಯಂತೆ. ಆ ಸ್ವಾಮಿಯ ದರ್ಶನಮಾಡಲು ಸೂರ್ಯನು ಅಲ್ಲಿಗೆ ರಥಸಪ್ತಮಿಯ ದಿನ ಸೂರ್ಯೋದಯದ ವೇಳೆಗೆ ಸರಿಯಾಗಿ ಬರುವನು. ಆ ಆಗಮನದ ಗುರುತಾಗಿ ಆ ದಿನ ಮಾತ್ರ ಆ ವೇಳೆಯಲ್ಲಿ ಲಿಂಗದ ಮೇಲೆ ಒಂದು ಬಿಸಿಲು ಕೋಲು ಬೀಳುವುದು.

## (೧೨) ಶಿವಗಂಗೆಯ ಮಹಿಮೆ

ಶಿವಗಂಗೆಯಲ್ಲಿ ಮಕರ ಸಂಕ್ರಾಂತಿಯ ದಿನ, ತಲಕಾವೇರಿಯಲ್ಲಿ ತುಲಾ ಸಂಕ್ರಮಣದ ದಿನ, ಗಂಗೆಯು ಬರುವಳು.

ಒಂಬತ್ತರಿಂದ ಹನ್ನೆರಡರ ವರೆಗಿನ ಕಥೆಗಳು ಪುರಾಣಗಳಲ್ಲಿ ಸೇರಿಹೋಗಿವೆ. ಪುರಾಣಗಳಲ್ಲಿ ಸೇರದೆ ಇರುವ, ಅರ್ಥವಾದದಂತಹ ಕೆಲವು ಕಥೆಗಳನ್ನೂ ಉದಾಹರಿಸೋಣ.

## (೧೩) ನಿಂಬರಗಿಯ ಪ್ರಾಣದೇವರು *

(೧) ಇಲ್ಲಿಯ (ನಿಂಬರಗಿ) ಪ್ರಾಣದೇವರ ಗುಡಿಯು ಪ್ರಸಿದ್ಧವುಂಟು . . . ಈ ಗುಡಿಯನ್ನು ಧನಾಯಿಯೆಂಬ ಕುರುಬರ ಹೆಂಗಸು ಕಟ್ಟಿಸಿದಳೆಂದು ಹೇಳುತ್ತಾರೆ. ಧನಾಯಿಯು ತನ್ನ ಆಕಳು ಒಂದು ಹುತ್ತಿನ ಮೇಲೆ ಮೊಲೆಯೊಳಗಿನ ಹಾಲು ಕರೆದು ಬರಿ ಮೊಲೆಯಾಗಿ ಮನೆಗೆ ಬರುತ್ತದೆಂದು ನೋಡಿ ಆಕಳನ್ನು ಮನೆಯಲ್ಲಿ ಕಟ್ಟಿದಳು. ಆ ರಾತ್ರಿಯಲ್ಲಿ ಆ ಹುತ್ತಿನ ಮೇಲೆ ಒಂದು ಗುಡಿಯನ್ನು ಕಟ್ಟಿಸಿ ಒಂಬತ್ತು ತಿಂಗಳು ಅದರ ಬಾಗಿಲು ಇಕ್ಕಿಬಿಡೆಂದು ಆಕೆಗೆ ಸ್ವಪ್ನವಾಯಿತು. ಆಕೆ ಆ ಪ್ರಕಾರ ಗುಡಿಯನ್ನು ಕಟ್ಟಿಸಿ ಕೆಲವು ತಿಂಗಳು ಬಾಗಿಲವನ್ನು ಇಕ್ಕಿ ಇಟ್ಟಬಳಿಕ ಸ್ತ್ರೀಸ್ವಭಾವದ ಮೂಲಕವಾಗಿ ಒಂಬತ್ತು ತಿಂಗಳು ತುಂಬುವ ಪೂರ್ವದಲ್ಲಿಯೇ ಬಾಗಿಲು ತೆರೆದಳು. ಆಗ ಗುಡಿಯೊಳಗಿನ ಮೂರ್ತಿಯು ಅರೆವಾಸಿ ಹುಟ್ಟಿತ್ತು. ಅದು ಅಷ್ಟಕ್ಕೇ ನಿಂತಿತು.

(೨) ಶೃಂಗೇರಿಯ ಮಲ್ಲಿಕಾರ್ಜುನ ದೇವಸ್ಥಾನದಲ್ಲಿ ಹಿಂದಿನ ಗುರುಗಳೊಬ್ಬರು ಇದ್ದಲಿನಿಂದ ವಿಘ್ನೇಶ್ವರನನ್ನು ಬರೆದರು. ಅಲ್ಲಿ ಕಲ್ಲು ಉಬ್ಬಿ ಗಣಪತಿಯ ಮೂರ್ತಿಯು ಮೂಡಿತು. ಈಗ ಆ ಮೂರ್ತಿಗೆ ಬೇಕಾದ ಹಾಗೆ ಹರಕೆಗಳು ಸಲ್ಲುತ್ತಿವೆ.

(೩) ಶ್ರೀ ವ್ಯಾಸರಾಯ ಮಠದ ಕೃಷ್ಣವಿಗ್ರಹವು ಕಾಲು ಮೇಲೆತ್ತಿಕೊಂಡು ನಿಂತಿರುವುದಕ್ಕೆ ಹೇಳುವ ಕಥೆಯನ್ನೂ, ಉಡುಪಿಯ ಕೃಷ್ಣನ ಕಥೆಯನ್ನೂ ನೆನೆಸಿಕೊಳ್ಳಿ.

ಗುರುತಿನ ಕಥೆಗಳನ್ನೂ ವಿಧಿನಿಷೇಧದ ಕಥೆಗಳನ್ನೂ ಈ ಜಾತಿಯಲ್ಲಿಯೇ ಸೇರಿಸಿ ಒಂದೆರಡು ಉದಾಹರಣೆ ಕೊಡೋಣ.

(೧೪) ಕೋಗಿಲೆಯು ಕೋಪಗೊಂಡು ಚಿಕ್ಕತಾಯಿಯನ್ನು ಸಂಹರಿಸಿತಂತೆ. ಆಮೇಲೆ ಪಶ್ಚಾತ್ತಾಪ ಹುಟ್ಟಿ ಈಗ "ಚಿಕ್ಕವ್ವಾ" ಎಂದು ಕೂಗಿಕೊಂಡು ಅಲೆಯುತ್ತಿದೆಯಂತೆ.†

## (೧೫) ಬೂದಿಗುಂಬಳಕಾಯಿಯ ಕಥೆ

ಅರಸಾದ ಭರತನ ಕಾಲದಲ್ಲಿ ಬೇಸಾಯಗಾರರು ಅರಮನೆಗೆ ಹೋಗಿ "ಜೀಯ್ಯಾ! ಈ ಸಲ ಅರಮನೆಗೆ ಯಾವ ಬೆಳೆ ಒಪ್ಪಿಸಬೇಕು?" ಎಂದು ಬಹು ವಿನಯದಿಂದ

---

* "ಕರ್ನಾಟಕ ಗೆಜೆಟಿಯರ್," ಪುಟ ೫೫೧.

† ಹೋಲಿಸಿರಿ :—ಹಿಪ್ಪಿ ಹೂವಿಗಾಗಿ ಹೆತ್ತ ತಾಯಿನ ಕೊಂದು
ಮತ್ತ ಕೋಗಿಲ ಮರನೇರಿ ಕೂಗಿದರ
ಹೆತ್ತವ್ವ ಎಲ್ಲಿ ದೊರೆತಾಳ ॥ —ಗರತಿಯ ಹಾಡು, ಪುಟ ೭೨.

ಕೇಳಿದರು. ಅರಸನು ಮೇಲು ಬೆಳೆಯೆಂದರೆ ಬುಡದಲ್ಲಿ ಫಲವಾಗುವ ಬೆಳೆಯನ್ನೂ ಕೀಳು ಬೆಳೆಯೆಂದರೆ ತಲೆಯ ಮೇಲೆ ಫಲಬಿಡುವ ಬೆಳೆಯನ್ನೂ ಮಾಡುತ್ತ ರಾಜಾ ದಾಯಕ್ಕೆ ನಾಮವಿಕ್ಕುತ್ತಾ ಬಂದರು. ಭರತನು ಶ್ರೀರಾಮನ ಪ್ರಜೆಗಳು ನೊಂದಾರೆಂದು ಸುಮ್ಮನಿದ್ದನು. ಶ್ರೀರಾಮನು ಬರುವ ವೇಳೆಗೆ ಬೇಸಾಯಗಾರರಿಗೆ ಬೇಕಾದಷ್ಟು ಐಶ್ವರ್ಯವು ಸೇರಿ ಅವರಿಗೆ ತಲೆತಿರುಗಿಹೋಗಿದ್ದಿತು. "ಇವರನ್ನು 'ಮಟ್ಟಾ'ಹಾಕದಿದ್ದರೆ ರಾಜ್ಯಕ್ಕೆ ಕ್ಷೇಮವಿಲ್ಲ"ವೆಂದು ಯೋಚಿಸಿ, ಅರಸನು ಅವರನ್ನು ಕರೆಯಿಸಿ, "ಈ ಸಲ ನಾವು ಕೊಟ್ಟ ಬೀಜದ ಬೆಳೆ ಮಾಡಬೇಕು. ನೀವು ಸರಿಯಾಗಿ ಬೆಳೆ ಮಾಡದಿದ್ದರೆ ನಾವು ಬೆಳೆದ ಫಲದ ತೂಕ ಚಿನ್ನವನ್ನು ಕೊಡಬೇಕು" ಎಂದು ನಿಬಂಧನೆ ಮಾಡಿಕೊಂಡು, ಹುರಿದಿರುವ ಬೂದಿಗುಂಬಳದ ಬೀಜಗಳನ್ನು ಕೊಟ್ಟನು. ಸೊಕ್ಕಿದ್ದ ಬೇಸಾಯಗಾರರು ಅದನ್ನು ಗಮನಿಸದೆ ಆ ಬೀಜಗಳನ್ನು ತಂದು ನೆಟ್ಟರು. ಅವು ಮೊಳೆಯಲೇ ಇಲ್ಲ. ಅರಮನೆಯಲ್ಲಿ ಬಿತ್ತಿದ ಬೀಜಗಳು ಹೊರವಾಗಿ ಬೆಳೆದು ಆಳೆತ್ತಲಾರದಷ್ಟು ಭಾರಿಯ ಕಾಯಿಗಳನ್ನು ಬಿಟ್ಟುವು. ಬೇಸಾಯಗಾರರು ಮರು ಮಾತಾಡದೆ ಆ ಕಾಯಿಗಳ ತೂಕ ಚಿನ್ನವನ್ನು ಕೊಟ್ಟು, ಅಂದಿನಿಂದ ತಮ್ಮ ಜಾತಿಗೇ ಮೋಸಮಾಡಿದ ಕಾಯಿಯೆಂದು ಅವರು ಬೂದಿಗುಂಬಳಕ್ಕೆ ಬಹಿಷ್ಕಾರ ಹಾಕಿದರಂತೆ.

"ಬೆಳ್ಳಿಯು ರುದ್ರನ ಕಣ್ಣೀರು. ಅದರಿಂದ ಯಜ್ಞಗಳಲ್ಲಿ ಬೆಳ್ಳಿಯನ್ನು ದಕ್ಷಿಣೆ ಯಾಗಿ ಕೊಟ್ಟರೆ ಕಣ್ಣೀರು ಬಿಡಬೇಕಾಗುವುದು. ಅದರಿಂದ ಬೆಳ್ಳಿಯನ್ನು ದಕ್ಷಿಣೆಯಾಗಿ ಕೊಡಕೂಡದು" ಎಂದು ಮುಂತಾದ ವಿಧಿನಿಷೇಧ ಬೋಧಕವಾದ ಬ್ರಾಹ್ಮಣಗಳ ಅರ್ಥವಾದದ ಕಥೆಗಳನ್ನು ಇದರೊಡನೆ ಹೋಲಿಸಿರಿ.

## (ಇ) ವಿನೋದದ ಕಥೆಗಳು

### (೧೬) ಜಂತದಕ್ಕಯ್ಯನ ಕಥೆ

ಒಂದಾನೊಂದು ಪಟ್ಟಣದಲ್ಲಿ ಒಬ್ಬ ಅರಸನಿದ್ದನು. ಅವನಿಗೆ ಮಕ್ಕಳಾಗಲಿಲ್ಲ. ಈ ಚಿಂತೆಯು ಅರಸನಿಗೂ ಅರಸಿತಿಗೂ ಬಹಳವಾಗಿ ಅವರು ದಿನೇ ದಿನೇ ಕೊರಗಿ ಹೋದರು. ಇದನ್ನು ತಿಳಿದು ಪುರೋಹಿತನು "ಪ್ರಭು! ನಮ್ಮ ಅರಮನೆಯ ಪಟ್ಟ ದಾನೆಯು ದೇವಾಂಶ ಸಂಭೂತವಾದುದು. ಅದಕ್ಕೆ ಹರಸಿಕೊಳ್ಳಿ, ಮಕ್ಕಳಾಗುವುದು" ಎಂದು ಅರಿಕೆ ಮಾಡಿದನು. ಅರಸನೂ ಅರಸಿತಿಯೂ ಒಪ್ಪಿದರು.

ಮರುದಿನ ಪೂಜೆಯ ವೇಳೆಯಲ್ಲಿ ಅರಸಿತಿಯು ಪಟ್ಟದಾನೆಗೆ ಬೇಕಾದ ಹಾಗೆ ಪೂಜೆಮಾಡಿ "ಪಟ್ಟದಾನೆ! ಪಟ್ಟದಾನೆ! ನನಗೊಂದು ಮಗು ಕೊಡು. ನನಗೆ ಮಗು ವಾದರೆ ಅದನ್ನು ನಿನ್ನ ಮೇಲೆ ಕೂರಿಸಿ ಊರಸುತ್ತೂ ಮೆರವಣಿಗೆ ಮಾಡಿಸುತ್ತೇನೆ. ಅದಕ್ಕೆ ನಿನ್ನ ಹೆಸರು ಇಡುತ್ತೇನೆ" ಎಂದು ಹರಸಿಕೊಂಡಳು. ಪಟ್ಟದಾನೆಯು ಪ್ರಸನ್ನವಾಗಿ ವರ ಕೊಟ್ಟಿತು.

ಬರುವ ವರ್ಷ ಅರಸಿತಿಗೆ ಒಂದು ಹೆಣ್ಣು ಮಗುವಾಯಿತು. ಆದರೆ ಅವಳಿಗೆ ಮಗುವೊಂದನ್ನೇ ಆನೆಯ ಮೇಲೆ—ಅದರಲ್ಲೂ ಯಾರೂ ಕುಳಿತುಕೊಳ್ಳದ ಪಟ್ಟದಾನೆಯ ಮೇಲೆ—ಕುಳ್ಳಿರಿಸಿ ಮೆರವಣಿಗೆ ಮಾಡುವುದಕ್ಕೆ ಹೆದರಿಕೆ. ಆದರಿಂದ ದಿನ ದಿನವೂ "ಬರುವ ವರ್ಷ ಮೆರವಣಿಗೆ ಮಾಡಿಸುತ್ತೇನೆ ಗಜರಾಜ! ಕೋಪಮಾಡಿಕೊಳ್ಳಬೇಡ" ಎಂದು

ಹೇಳುತ್ತಲೇ ಬಂದಳು. ಹೆಸರಿಸದೂ ಹಾಗೆಯೇ ಆಯಿತು. "ಅರಸು ಮಕ್ಕಳಿಗೆ ಆನೆ ಹೆಸರು ಇಡುವುದೇ ?" ಎಂದು ಯೋಚನೆಯಾಗಿ ನಾಮಕರಣವನ್ನೇ ಮಾಡಲಿಲ್ಲ.

ಮಗುವಿಗೆ ಒಂದು ವರ್ಷ ತುಂಬಿತು ; ಎರಡು ವರ್ಷವಾಯಿತು ; ಮೂರಾಯಿತು ; ಐದಾಯಿತು ; ಎಂಟಾಯಿತು ; ಹನ್ನೆರಡೂ ತುಂಬಿತು ; ಮಗುವು ಮೈಯೂ ನೆರೆಯಿತು; ಆದರೂ ಅರಸಿತಿಯು ಹೆದರಿಕೆಯಿಂದ ಮೆರವಣಿಗೆಯ ಪ್ರಯತ್ನವೇ ಮಾಡಲಿಲ್ಲ. ಆನೆಯು ಕೊನೆಗೆ ಮೇವೂ ನೀರೂ ಬಿಟ್ಟುಬಿಟ್ಟಿತು. ಆಗ ಅರಸನಿಗೆ ದಿಗಿಲಾಗಿ ಕಣಿಯನ್ನು ಕೇಳಲು, ಅವರು ಹರಕೆ ತೀರಿಸಲಿಲ್ಲವೆಂದು ಗಜರಾಜನಿಗೆ ಕೋಪ ಬಂದಿದೆಯೆಂದರು. ಆಗ ಅರಸನಿಗೆ ಹರಕೆಯ ನೆನೆಪಾಯಿತು. ಯತ್ನವಿಲ್ಲದೆ ರಾಜರಾಣಿಯರು ಮೆರವಣಿಗೆಗೆ ಒಪ್ಪಿದರು. ಗಜರಾಜನು ಮೇವು ಮೆಯ್ದು ನೀರು ಕುಡಿಯಿತು.

ಮರುದಿನ ಗಜರಾಜನಿಗೆ ಪೂಜೆ ಪುರಸ್ಕಾರ ಎಲ್ಲವೂ ಮಾಡಿ ಅಂಬಾರಿಯನ್ನು ಹೂಡಿ ಅದರಲ್ಲಿ ದೊರೆಯ ಮಗಳನ್ನು ಕುಳ್ಳಿರಿಸಿ ಬಾಜಾ ಬಜಂತ್ರಿ ಸಮೇತವಾಗಿ ಮೆರವಣಿಗೆ ಹೊರಡಿಸಿದರು. ರಾಣಿಯು "ಮಗಳು ಒಬ್ಬಳೇ ಕುಳಿತಿರುವಳಲ್ಲ ಏನು ಗತಿ !" ಎಂದು ಕಣ್ಣೀರು ಕರೆದು ಹಂಬಲಿಸಿದಳು. "ಹಾಳು ಆನೆ ಎಷ್ಟು ಹಟ ಹಿಡಿಯಿತು" ಎಂದು ಬಯ್ದಳು. ಆನೆಗೆ ಇದಿಷ್ಟೂ ತಿಳಿಯಿತು.

ಮೆರವಣಿಗೆಯು ಊರುಸುತ್ತಿ ಬರುವವರೆಗೂ ಆನೆಯು ಉಸಿರೆತ್ತಲಿಲ್ಲ. ಗ್ರಾಮ ಪ್ರದಕ್ಷಿಣೆಯಾಗಿ ಮೆರವಣಿಗೆಯು ನಗರದೊಳಕ್ಕೆ ಬರಲು ಇನ್ನೇನು ತಿರುಗಬೇಕು, ಆಗ ಆನೆಯು ಒಂದು ಸಲ ಘರ್ಜಿಸಿತು. ಆ ಘರ್ಜನೆ ಕೇಳಿ ಎಲ್ಲರೂ ಬೆಚ್ಚಿಬಿದ್ದರು. ಇನ್ನೊಂದುಸಲ ಆರ್ಭಟಿಸಲು ಎಲ್ಲಿಯವರಲ್ಲಿ ಚೆಲ್ಲಾಪಿಲ್ಲಿಯಾದರು. ರಾಜಕುಮಾರಿಯು ಕಿಟಾರನೆ ಕಿರಿಚಿಕೊಂಡು ಅಂಬಾರಿಯಲ್ಲಿಯೇ ಮೂರ್ಛೆಹೋದಳು. ಆನೆಯು ಅಂಬಾರಿಯನ್ನೂ ದೊರೆಮಗಳನ್ನೂ ಹೊತ್ತುಕೊಂಡು ಕಾಡಿನ ಕಡೆಗೆ ನುಗ್ಗಿತು.

ಕಾಡಿನಲ್ಲಿ ಅಡ್ಡವಾಗಿ ಸಿಕ್ಕಿದ ಮರಗಳನ್ನು ಮುರಿದೊಟ್ಟಿ ಆನೆಯು ಮುಂದೋಡುತ್ತಿದೆ. ಎಷ್ಟಾಗಲಿ, ದೊರೆಯ ಮಗಳು ! ಬುದ್ಧಿವಂತೆ ! ಕೇಳಬೇಕೆ ? ಕೈಗೆ ಸಿಕ್ಕಿದ ಮರದ ಕೊಂಬೆಯನ್ನು ಹಿಡಿದು ಮೇಲಕ್ಕೆ ಹತ್ತಿಕೊಂಡುಬಿಟ್ಟಳು. ಆ ಕೋಪದಲ್ಲಿ ಆನೆಗೆ ಅದು ತಿಳಿಯಲಿಲ್ಲ. ಇನ್ನಷ್ಟು ದೂರ ಹೋಗಿ ಅಂಬಾರಿಯನ್ನು ಕೆಳಕ್ಕೆ ಕೆಡಪಿ ಅದರ ಮೇಲೆ ತಾನೂ ಬಿದ್ದು ಅದನ್ನು ಚೂರು ಚೂರು ಮಾಡಿ, ತಾನೂ ಅಲ್ಲಿಯೇ ಬಿದ್ದು ಪ್ರಾಣಬಿಟ್ಟಿತು.

ಈ ಆರ್ಭಟವನ್ನು ಕಂಡು ಬೆದರಿದ ರಾಜಪುತ್ರಿಯು ಎರಡು ಮೂರು ದಿನ ಕೆಳಕ್ಕೇ ಇಳಿಯಲಿಲ್ಲ. ಕೊನೆಗೆ ಆನೆಯು ಸತ್ತುಹೋಗಿರುವುದು ನಿಜವೆಂದು ಆದ ಮೇಲೆ, ಹಣವನ್ನು ಹದ್ದುಗಳು ಕಿತ್ತು ತಿನ್ನುವುದನ್ನು ಕಂಡಮೇಲೆ, ಕೆಳಕ್ಕಿಳಿದು ಬಂದು ಹೊಟ್ಟೆಗೆ ಏನಾದರೂ ಸಿಕ್ಕೀತೇ ಎಂದು ಹುಡುಕಿಕೊಂಡು ಹೊರಟಳು.

ಕೊಂಚ ದೂರದಲ್ಲಿ ಕಾಡು ಕುರುಬರ ಕೊಪ್ಪಲು ಇದ್ದಿತು. ಅವರು ಇವಳ ಕಥೆಯನ್ನು ಕೇಳಿ ಮರುಗಿ ಇವಳಿಗೆ ಬೇಕಾದ ಉಪಚಾರವೆಲ್ಲ ಮಾಡಿ ಸತ್ತ ಆನೆಯ ದಂತ ತೆಗೆದು ಸಮೀಪದಲ್ಲಿಯೇ ಒಂದು ಮರದ ಮೇಲೆ ಒಂದು ಮನೆ ಕಟ್ಟಿಕೊಟ್ಟರು. ಆ ದಂತದ ಮನೆಯಲ್ಲಿ ಇವಳು ಇದ್ದುಕೊಂಡು ಕಾಡು ಕುರುಬರು ತಂದುಕೊಟ್ಟ

ಹಣ್ಣು, ಜೇನು, ಹಾಲು, ಮೊಸರು ತಿಂದುಕೊಂಡು ಸುಖವಾಗಿದ್ದಳು. ಇವಳು ಜಂತದ ಮನೆಯಲ್ಲಿ ಇದ್ದಳೆಂದು ಎಲ್ಲರೂ ಇವಳನ್ನು "ಜಂತದಕ್ಕಯ್ಯ! ಜಂತದಕ್ಕಯ್ಯ!" ಎಂದು ಕರೆಯುತ್ತಿದ್ದರು.

[ಮುಂದೆ ಜಂತದಕ್ಕಯ್ಯನನ್ನು ಒಬ್ಬನು ದೊರೆಯ ಮಗನು ವರಿಸುತ್ತಾನೆ. ಊರಿಗೆ ಕರೆಸಿಕೊಳ್ಳುವೆನೆಂದು ಹೇಳಿಹೋಗಿ, ಅಲ್ಲಿ ತಂದೆತಾಯಿಗಳ ಬಲವಂತದಿಂದ ಬೇರೆ ಹೆಣ್ಣು ಮದುವೆಮಾಡಿಕೊಳ್ಳುತ್ತಾನೆ. ಒಂದು ಸಲ ಆ ಬೇಡದ ಹೆಂಡತಿಯನ್ನು ತವರುಮನೆಗೆ ಕರೆದುಕೊಂಡು ಹೋಗುತ್ತಾ ಕೊಪ್ಪಲಿನ ಬಳಿಯಲ್ಲಿ ನಿಲ್ಲುತ್ತಾನೆ. ಆಗ ಜಂತದಕ್ಕಯ್ಯನು ಬುದ್ಧಿವಂತಿಕೆಯಿಂದ ತನ್ನ ಸವತಿಯನ್ನು ಗೋಳುಗುಟ್ಟಿಸಿ ಹಣ್ಣು ಮಾಡಿ, ಗಂಡನನ್ನು ಸೇರಿ ಸುಖವಾಗಿರುತ್ತಾಳೆ.]

ಈ ಕಥೆಯನ್ನು ಐತರೇಯ ಬ್ರಾಹ್ಮಣದಲ್ಲಿ ಬರುವ ಹರಿಶ್ಚಂದ್ರನ ಕಥೆಯೊಡನೆ ಹೋಲಿಸಿರಿ. "ಹರಿಶ್ಚಂದ್ರನು, 'ಮಗನಾದರೆ ಅವನನ್ನು ನಿನಗೆ ಪಶುಮಾಡುವೆನು' ಎಂದು ವರುಣನಿಗೆ ಹರಕೆಹೊತ್ತು ಮಗನನ್ನು ಪಡೆದನು. ಕೊನೆಗೆ ತನಗೆ ಜಲೋದರವು ಬರುವವರೆಗೂ ಹರಕೆಯ ಪೂರೈಕೆಯನ್ನು ತಡೆದು, ಆಮೇಲೂ ಅಜೀಗರ್ತನ ಮಗನನ್ನು ಕೊಂಡುತಂದು ತನ್ನ ಮಗನ ಸ್ಥಾನದಲ್ಲಿ ಅವನನ್ನು ಪಶುವಾಗಿ ಕಂಭಕ್ಕೆ ಬಿಗಿದನು." ಈ ಎರಡು ಕಥೆಗಳೂ ಏಕಜಾತಿಯಲ್ಲವೆ ನೋಡಿರಿ!

## (೧೭) ರಾಕ್ಷಸನ ಕಥೆ

ಒಬ್ಬಾನೊಬ್ಬ ರಾಜಪುತ್ರನು ಒಂದು ದಿನ ಬೇಟೆಗೆ ಹೋದನು. ಅಲ್ಲಿ ಯಾವುದೋ ಒಂದು ಕಾಡುಮೃಗವನ್ನು ಅಟ್ಟಿಕೊಂಡು ಹೋಗಲು ಅದು ಒಂದು ಭಾರಿಯ ಕಾಡಿನ ನಡುವೆ ಇದ್ದ ಅರಮನೆಗೆ ಓಡಿಹೋಯಿತು. ಆ ಅರಮನೆಯನ್ನು ಕಂಡು ರಾಜಪುತ್ರನು ಆಶ್ಚರ್ಯದಿಂದ ಒಳಹೊಕ್ಕು ನೋಡುವಲ್ಲಿ ಅಲ್ಲಿ ಯಾರೂ ಇದ್ದಹಾಗೆ ಕಾಣಲಿಲ್ಲ. ಕೊನೆಗೆ ಬಹಳ ಹುಡುಕಿದ ಮೇಲೆ ಅಂತಃಪುರದ ಒಂದು ಮೂಲೆಯಲ್ಲಿ ಒಂದು ಚಿಕ್ಕ ಮನೆಯಲ್ಲಿ ಸುಂದರಿಯಾದವಳೊಬ್ಬಳು ಅಳುತ್ತ ಮಲಗಿರುವುದು ಕಾಣಿಸಿತು. ಅವಳು ಈ ರಾಜಪುತ್ರನಿಗೆ "ಇದು ರಾಕ್ಷಸನ ಅರಮನೆ. ತನ್ನನ್ನು ಅವನು ಹೊತ್ತುಕೊಂಡು ಬಂದಿದ್ದಾನೆ. ಮದುವೆಮಾಡಿಕೊಳ್ಳೆಂದು ನಿತ್ಯವೂ ಪೀಡಿಸುತ್ತಿದ್ದಾನೆ. ಏನೇನೋ ನೆಪಹೇಳಿ ತಾನು ತಪ್ಪಿಸಿಕೊಳ್ಳುತ್ತಿದ್ದೇನೆ" ಎಂಬುದನ್ನು ಹೇಳಿ, "ಅವನು ಬಂದರೆ ನೀನು ಉಳಿಯುವುದು ಕಷ್ಟ. ಈಗಲೇ ಹೊರಟುಹೋಗು" ಎಂದು ಸೂಚಿಸಿದಳು.

ರಾಜಪುತ್ರನು ಹೆದರದೆ, "ಚಿಂತೆಯಿಲ್ಲ. ನಾನು ಅವನನ್ನು ಎದುರಿಸಬಲ್ಲೆನು" ಎಂದನು. ಅವನ ಧೈರ್ಯವನ್ನು ಕಂಡು ಮೆಚ್ಚಿದ ಅವಳು "ಹಾಗಾದರೆ ಇರು. ನೀನು ಈ ದಿನವೇ ಯುದ್ಧಮಾಡಬೇಡ. ಇವನು ಬಹಳ ಮಾಯಾವಿ. ತನ್ನ ಜೀವವೆಲ್ಲಿಟ್ಟಿರುವನೋ ಕೇಳಿ ತಿಳಿದುಕೊಳ್ಳುವೆನು. ಅನಂತರ ನೀನು ಅವನೊಡನೆ ಯುದ್ಧ ಮಾಡುವೆಯಂತೆ!" ಎಂದು ಹೇಳಿ ಅವನನ್ನು ಮುಚ್ಚಿಟ್ಟಳು.

ರಾಕ್ಷಸನು ಬಂದು ತನ್ನ ಮಾಯೆಯಿಂದ ಆಹಾರಪಾನೀಯಗಳನ್ನೆಲ್ಲ ತರಿಸಿ ರಾಜಕುಮಾರಿಯನ್ನು ಊಟಕ್ಕೆ ಕರೆದನು. ಅವಳು ಎಂದಿಗಿಂತ ಹೆಚ್ಚಿನ ವೈಯಾತ

ವಾಡುತ್ತ, "ನೀನು ಇಲ್ಲದಿರುವಾಗ ನಾನೊಬ್ಬಳೇ ಇರಬೇಕು. ಆಗ ನಿನ್ನಮೇಲೆ ಯಾರು ಯುದ್ಧಕ್ಕೆ ಬಂದರೊ? ಯಾರು ನಿನ್ನನ್ನು ಗೆದ್ದುಬಿಟ್ಟರೋ? ನೀನೇನಾದೆಯೋ ಎಂಬ ಯೋಚನೆಯೇ ನನಗೆ!" ಎಂದು ಕಣ್ಣೀರಿಟ್ಟಳು. ಅವನು ಮೋಸಹೋಗಿ "ಅಯ್ಯೋ! ನನ್ನ ಚಿನ್ನ! ಒಂದಾನೊಂದು ದ್ವೀಪದಲ್ಲಿ ಒಂದು ಅರಮನೆಯಿದೆ. ಅರಮನೆಗೆ ಬೇಕಾದಷ್ಟು ಕಾವಲಿದೆ. ಅಲ್ಲಿ ಒಂದು ನೂರು ಗಿಣಿಗಳಿವೆ. ಆ ಗಿಣಿಗಳ ನಡುವೆ ಒಂದು ಗಿಣಿಯ ಕತ್ತಿನಲ್ಲಿ ಒಂದು ಡಬ್ಬಿಯಿದೆ. ಆ ಡಬ್ಬಿಯಲ್ಲಿ ಐದು ಪುಟ್ಟ ದುಂಬಿಗಳಿವೆ. ಅವುಗಳಲ್ಲಿದೆ ನನ್ನ ಪ್ರಾಣ. ಆ ಐದು ದುಂಬಿಗಳನ್ನೂ ಒಟ್ಟಿಗೆ ಯಾರಾದರೂ ಕೊಂದರೆ, ಆಗ ನಾನು ಸಾಯುವುದು. ಅದರಿಂದ ನೀನು ಧೈರ್ಯವಾಗಿರು" ಎಂದನು.

ಎರಡನೆಯ ದಿವಸ "ಆ ದ್ವೀಪ, ಅದೆಲ್ಲಿದೆ, ಆ ಅರಮನೆಯ ಕಾವಲಿನವರನ್ನು ದಾಟಿ ಹೋಗುವುದೆಂತು? ಆ ನೂರು ಗಿಣಿಗಳಲ್ಲಿ ಡಬ್ಬಿಯಿರುವ ಗಿಣಿಯನ್ನು ಹಿಡಿವುದೆಂತು? ಹಿಡಿದರೂ ಅದರಿಂದ ಡಬ್ಬಿಯನ್ನು ತೆಗೆದುಕೊಂಡು, ಆ ಐದು ದುಂಬಿಗಳನ್ನೂ ಒಟ್ಟಿಗೆ ಸಾಯಿಸುವುದೆಂತು?" ಎಂಬ ವಿಚಾರಗಳನ್ನೆಲ್ಲ ಕೇಳಿ ಕೇಳಿ ಗೊತ್ತು ಮಾಡಿಕೊಂಡಳು.

ರಾಜಪುತ್ರನು ರಾಕ್ಷಸನ ಪ್ರಾಣಗಳನ್ನು ಇಟ್ಟುಕೊಂಡಿರುವ ದುಂಬಿಗಳನ್ನು ಸಂಹರಿಸಲು ಹೊರಟನು. ರಾಕ್ಷಸನು ಹೇಳಿದ್ದಂತೆ ದಾರಿಯಲ್ಲಿ ಬಂದ ವಿಘ್ನಗಳನ್ನೆಲ್ಲ ನಿವಾರಿಸಿಕೊಂಡು ಹೋಗಿ ಗಿಣಿಯನ್ನು ಹಿಡಿದು ಐದು ದುಂಬಿಗಳನ್ನೂ ಒಟ್ಟಿಗೆ ಕೊಂದನು: ಅವನು ಅಲ್ಲಿ ಕೊಲ್ಲುತ್ತಲೂ ಇಲ್ಲಿ ರಾಕ್ಷಸನು ಕುಳಿತಿದ್ದವನು ಮೇಲಕ್ಕೆ ಹಾರಿ ಕೆಳಗೆ ಬಿದ್ದು ಸತ್ತನು. ಕೂಡಲೆ ಮಾಯದ ಆ ಅರಮನೆಯೂ ಆ ದ್ವೀಪವೂ ಕಾವಲುಗಾರರೂ ಗಿಣಿಗಳೂ ಎಲ್ಲವೂ ಮಾಯವಾದುವು. ರಾಜಪುತ್ರನೂ ರಾಜಪುತ್ರಿಯೂ ಹಾರಿಬಂದು ಒಂದು ಗವಿಯಲ್ಲಿ ಬಿದ್ದರು. ಕೊನೆಗೆ ಇಬ್ಬರೂ ಅದೃಷ್ಟವಶದಿಂದ ಆ ಗವಿಯಿಂದ ಪಾರಾಗಿ ಬಹು ಕಷ್ಟಪಟ್ಟು ತಮ್ಮ ರಾಜಧಾನಿಯನ್ನು ಸೇರಿ ಒಬ್ಬರನ್ನೊಬ್ಬರು ಮದುವೆಯಾಗಿ ಸುಖವಾಗಿದ್ದರು.

ಇದರಲ್ಲಿ ಬರುವ ಕಾಮರೂಪಿಗಳಾದ ರಾಕ್ಷಸರು, ಅವರು ತಮ್ಮ ಜೀವವನ್ನು ದೂರದಲ್ಲೊಂದೆಡೆ ಭದ್ರಪಡಿಸಿರುವುದು, ಕೊನೆಗೂ ಮೃತ್ಯುವಿನ ಪಾಲಾಗುವುದು, ಇವುಗಳನ್ನು ಗಮನಿಸಿರಿ. ಇದನ್ನು ಮೈರಾವಣ ಹೈರಾವಣರ ಕಥೆಯೊಡನೆ ಹೋಲಿಸಿರಿ.

ಅಡುಗೂಲಜ್ಜಿಯ ಕಥೆಗಳೂ ಈ ಜಾತಿಗೆ ಸೇರಿದುವು. ಇವು ದಿನಕ್ಕೆಷ್ಟು ಹುಟ್ಟುತ್ತಿವೆಯೋ ಎಷ್ಟು ಸಾಯುತ್ತಿವೆಯೋ ಅದನ್ನು ಕೂಡ ಲೆಕ್ಕಿಸುವುದು ಸಾಧ್ಯವಿಲ್ಲ. ಇದರ ಮೇಲೆ ಅಡುಗೂಲಜ್ಜಿಯ ಕಥೆಗಳನ್ನು ಕೇಳದಿರುವರೂ ಪ್ರಾಯಃ ಒಬ್ಬರೂ ಇಲ್ಲ. ಅದರಿಂದ ಅವುಗಳನ್ನು ಬಿಟ್ಟು ಮುಂದಕ್ಕೆ ಹೋಗೋಣ.

### (೧೮) ಮಂಕುಭಟ್ಟನ ಕಥೆ

ಮಂಕುಭಟ್ಟನು ಸ್ನೇಹಿತರ ಮನೆಗೆ ಊಟಕ್ಕೆ ಹೋಗಿದ್ದನು. ಅವರ ಮನೆಯಲ್ಲಿ ಕಡುಬು ಬಹು ರುಚಿಯಾಗಿತ್ತು. ಎರಡು ಸಲ ಕೇಳಿ ಹಾಕಿಸಿಕೊಂಡು

ತಿಂದರೂ ಅವನ ಆಶೆ ತೀರಲಿಲ್ಲ. ಇರಲಿ, ಮನೆಗೆ ಹೋಗಿ ಮಾಡಿಸಿಕೊಂಡು ತಿನ್ನುವುದು ಎಂದು ಕಡುಬು ಕಡುಬು ಎಂದು ಮನಸ್ಸಿನಲ್ಲಿಯೇ ಜಪಮಾಡಿಕೊಳ್ಳುತ್ತ ಸುಮ್ಮನಾದನು.

ದಾರಿಯಲ್ಲಿ ಬರುತ್ತ ಸ್ನೇಹಿತರೊಡನೆ ಏನೇನೋ ಮಾತು ಕಥೆಗಳಾಡುತ್ತ ಇವನಿಗೆ ಕಡುಬು ಎಂಬ ಹೆಸರು ಮರೆತುಹೋಯಿತು. ಅದರಂತೆಯೇ ಅದನ್ನು ತಿನ್ನಬೇಕೆಂಬ ಆಶೆಯೂ ಬರತುಹೋಗಬಾರದಾಗಿತ್ತೆ? ಇಲ್ಲ. ಆಶೆಯು ಇನ್ನೂ ತೀವ್ರ ವಾಯಿತು. ಬಂದು ಹೆಂಡತಿಯನ್ನು ಕರೆದು "ಲೇ! ಅವರ ಮನೆಯಲ್ಲಿ ಮಾಡಿದ್ದರಲ್ಲ ಅದನ್ನು ಮಾಡೆ!" ಎನ್ನುವುದಕ್ಕೆ ಆರಂಭಿಸಿದನು. ಹೆಂಡತಿಗೆ ಕಕ್ಕುಬಿಕ್ಕಾಯಿತು. "ಹೆಸರಿಲ್ಲ ಕುಲವಿಲ್ಲ ಅದನ್ನು ಮಾಡೆ ಎಂದರೆ ಏನುಮಾಡೋದು ನನ್ನ ಮೊಕಾನ" ಎಂದುಬಿಟ್ಟಳು. ಅವನು ಕೇಳಿಕೊಂಡ; ಹೇಳಿಕೊಂಡ; ಏನು ಮಾಡಿದರೂ ಫಲವಿಲ್ಲ ಎಂದಾಗುತ್ತಲೂ ಒಂದು ದೊಣ್ಣೆ ತೆಗೆದುಕೊಂಡು "ಇಕ್ಕಳಿಸಿ ಬಿಟ್ಟ." ಹೆಂಡತಿಯು ಚೆನ್ನಾಗಿ ಏಟು ತಿಂದು ಅಳುತ್ತಾ ಬಿದ್ದುಕೊಂಡಳು.

ಈ ಗದ್ದಲವು ಮಗ್ಗುಲ ಮನೆಯ ಮುದುಕಿಗೆ ಕೇಳಿಸಿ ಆಕೆಯು ಇದೇನು ನೋಡೋಣವೆಂದು ಬಂದಳು. ಆ ವೇಳೆಗೆ ಈ ಹುಡುಗಿಯ ಮೈಯೆಲ್ಲಾ ಊದಿ ಹೋಗಿದೆ. ಆಕೆಯು ನೋಡಿ "ಅಯ್ಯೋ! ಪಾಪ! ಕಡುಬು ಊದಿದ ಹಾಗೆ ಊದಿ ಹೋಗಿದೆಯಲ್ಲಪ್ಪಾ ಮೈಯೆಲ್ಲಾ!" ಎಂದು ಮರುಗಿದಳು.

ಮಂಕುಭಟ್ಟನು "ಹಾ! ಹಾ! ಅದೇ! ಅದೇ! ನಾನು ಮಾಡು ಎಂದದ್ದು ಕಡುಬು" ಎಂದನು.

ಹೆಂಡತಿಯು ಆ ನೋವಿನಲ್ಲಿಯೂ "ಪ್ರಾರಬ್ಧವೇ! ಈ ಕಡುಬಿಗೆ ಇಷ್ಟು ಏಟು ತಿನ್ನುವುದು ನನ್ನ ಹಣೆಯಲ್ಲಿ ಬರೆದಿತ್ತು" ಎಂದುಕೊಂಡು ಎದ್ದು ಕಡುಬು ಮಾಡಿಟ್ಟಳು. ಮಂಕುಭಟ್ಟನು ಚಪ್ಪರಿಸಿಕೊಂಡು ಮೆದ್ದನು. ಕಥೆ ಕಾಡಿಗೆ ಹೋಯ್ತು, ನಾನು ಊರಿಗೆ ಬಂದೆ.

## (೧೯) ಬೈರೆ ಕಿರಿಬೈರೆಯರ ಕಥೆ

ಬೈರೆ ಎಂಬ ತಾಯಿಯೂ ಕಿರಿಬೈರೆ ಎಂಬ ಅವಳ ಮಗಳೂ ಎಲ್ಲೋ ಒಂದೆಡೆ ಗುಡಿಸಲು ಹಾಕಿಕೊಂಡು ಇದ್ದರು. ಕಿರಿಬೈರೆಗೆ ಚೆಲುವೆಯಾದ ಮಗಳಿದ್ದಳು. ಅವಳನ್ನು ಈ ತಾಯಿ ಮಕ್ಕಳು ಬಹಳ ಪ್ರೀತಿಯಿಂದ ಕಾಪಾಡಿಕೊಂಡಿದ್ದರು. ಒಂದು ದಿನ ಬೇಟೆಗೆಂದು ಕಾಡಿಗೆ ಹೋಗಿದ್ದ ದೊರೆಯು ಅತ್ತ ಬಂದು ಕಿರಿಬೈರೆಯ ಮಗಳ ಚೆಲುವನ್ನು ಕಂಡು ಮೆಚ್ಚಿಕೊಂಡು ಅವಳನ್ನು ಮದುವೆಯಾದನು: ತನ್ನ ಹೊಸ ಹೆಂಡತಿಯನ್ನೂ ಅವರ ತಾಯಿ ಅಜ್ಜಿಯರನ್ನೂ ಕರೆದುಕೊಂಡುಹೋಗಿ ತನ್ನ ಅರಮನೆ ಯಲ್ಲಿಟ್ಟುಕೊಂಡನು. ಕಿರಿಬೈರೆಯ ಮಗಳು ಬಸುರಾದಳು. ಅದನ್ನು ಕಂಡು ಬೈರೆಯು ಮಗಳನ್ನು ಕರೆದು "ಕಿರಿಬೈರೆ! ಕಿರಿಬೈರೆ! ನಮ್ಮ ಮಗಳಾದರೊ ಬಸು ರಾಗಿದ್ದಾಳೆ. ಮಗು ಹೆತ್ತಾಗ ನಮಗೆ ಹೊತ್ತಿರುತ್ತೋ ಇರೋದೇ ಇಲ್ಲವೋ? ಈಗಲೇ ಮಗೂಗೆ ಅಂಗೀ ಕುಲಾಯೀ ಹೊಲೆದಿಡೋಣ" ಎಂದಳು. ಮಗಳು 'ಆಗಲಿ' ಎಂದಳು. ಸರಿ, ಇಬ್ಬರೂ ಅರಸನ ದಿರಸಿದ್ದ ಮನೆಗೆ ಹೋಗಿ ಅರಸನ ಮಕಮಲ್ಲಿನ ದಿರಸೆಲ್ಲ ಹರಿಹರಿದು ಮಗುವಿನ ಅಂಗೀ ಕುಲಾಯೀ ಮಾಡಿಬಿಟ್ಟರು. ಅರಸನು ಒಂದು

ದಿವಸ ಎಲ್ಲಿಯೋ ಹೋಗಬೇಕೆಂದು ಮಕಮಲ್ಲಿನ ದಿರಸಿಗೆ ಹೇಳಿಕಳುಹಿಸಿದಾಗ ಇವರ ಕೆಲಸವು ತಿಳಿಯಿತು. ಹೋಗಲಿ ಎಂದು ಇವರನ್ನು ಬಿಡದಿಗೆ ಕಳುಹಿಸಿದನು. ಅಲ್ಲಿ ಬೈರೆಯು ಕಿರಿಬೈರೆಯನ್ನು ಕರೆದು "ಕಿರಿಬೈರೆ! ಕಿರಿಬೈರೆ! ಮಗಳಾದರೋ ಬಸುರಾಗಿದ್ದಾಳೆ. ಬಸುರೊಸಗೆಯಂತೂ ಮಾಡಲ್ಲೇಬೇಕು. ಅವತ್ತಿನ ದಿನ ಹೊತ್ತಿರುತ್ತೊ ಇರೋದಿಲ್ವೊ? ಇವತ್ತೇ ಅಡಿಗೆ ಮಾಡಿಟ್ಟುಬಿಡೋಣ" ಎಂದಳು. ಮಗಳು 'ಆಗಲಿ' ಎಂದಳು. ಸರಿ. ಆ ಅರ್ಧರಾತ್ರಿಯಲ್ಲಿಯೆ ಒಲೆ ಹತ್ತಿಸಿ ಎಸರಿಟ್ಟು ಹನ್ನೆರಡು ಪಲ್ಲ ಅಕ್ಕಿ ಹಾಕಿ ಅನ್ನ ಬಸಿದೇಬಿಟ್ಟರು. ಈ ಗದ್ದಲದಲ್ಲಿ ಅರಸನಿಗೆ ಎಚ್ಚರವಾಗಿ ಇದೇನು ಎಂತ ನೋಡಿದರೆ ಬೆಳಗಾಗಿಲ್ಲ ಆಗಲೇ ಹನ್ನೆರಡು ಪಲ್ಲಾ ಅಕ್ಕಿ ಅನ್ನ ಆಗಿಹೋಗಿದೆ. ಸಾರು ಹುಳಿಗೆ ಪಾತ್ರೆಗಳು ಒಲೆಯ ಮೇಲೆ ಕೂತಿವೆ. ಅರಸನು ಸರಿ ಎಂದುಕೊಂಡು, ಇವರು ಇಲ್ಲೂ ಇರಬಾರದು ಎಂದು ಅವರನ್ನು ಕುದುರೆ ತೊಟ್ಟಿಗೆ ಕಳುಹಿಸಿದನು. ಅಲ್ಲಿ ಬಾಗಿಲಲ್ಲಿ ಒಂದು ಭಾರಿ ನಗಾರಿಯಿತ್ತು. ಕಿರಿಬೈರೆಯು "ಅಮ್ಮ! ಅಮ್ಮ! ಅದಷ್ಟು ಗಾತ್ರ ಇದೆಯಲ್ಲ ಅದೇಕೆ?" ಎಂದಳು. ಬೈರೆಯು "ಬಾ ನೋಡೋಣವಂತೆ" ಎಂದು, ಇಬ್ಬರೂ ಅಲ್ಲಿಗೆ ಹೋದರು. ಹೋದವರು ಸುಮ್ಮನಿದ್ದರೆ? ಅದನ್ನು ಮುಟ್ಟಿದರು. ಅದು ಢಂ ಎಂತು. "ಹಾ! ನಾವು ದೊರೆಗೆ ಮಗಳನ್ನು ಕೊಟ್ಟರೋ ಬೀಗರು. ನಮ್ಮನ್ನು ಢಂ ಎಂತೀಯಾ?" ಎಂದು ಅದಕ್ಕೆ ಒಂದೊಂದು ಏಟು ಕೊಟ್ಟರು. ಅದು ಇನ್ನೂ ಢಂ ಢಂ ಎಂತು. ಇವರು ಇನ್ನೂ ಹೊಡೆದರು. ದೊರೆಯು ಆ ಸದ್ದು ಕೇಳಿ ಏನು ಆಗಿಹೋಯ್ತೊ ಅಂತ ಓಡೋಡಿ ಬಂದನು. ಯುದ್ಧಗಿದ್ಧ ಆದರೆ ಬಡಿಯೋ ಆ ನಗಾರಿಯ ಬಡಿತ ಕೇಳಿ ಸುತ್ತಮುತ್ತಲಿದ್ದವರೆಲ್ಲ ಓಡೋಡಿ ಬಂದರು. ದೊರೆಯು ಬಂದವರಿಗೆಲ್ಲ ಉಪಚಾರಮಾಡಿ "ನಿಮ್ಮೆಲ್ಲರನ್ನೂ ನೋಡಬೇಕು ಎನ್ನಿಸಿತು. ಅದಕ್ಕೋಸ್ಕರ ನಾನೇ ನಗಾರಿ ಬಡಿಸಿದೆ" ಎಂದು ಹೇಳಿ, ಅವರನ್ನೆಲ್ಲ ಕಳುಹಿಸಿಕೊಟ್ಟು ಬೈರೇ ಕಿರಿಬೈರೆಯರನ್ನು ಮತ್ತೆ ಕಾಡಿನ ಗುಡಿಸಲಿಗೆ ಕಳುಹಿಸಿ, ತಾವು ಗಂಡಹೆಂಡಿರು ಸುಖವಾಗಿದ್ದರಂತೆ. ಕಥೆ ಕಾಡಿಗೆ ಹೋಯ್ತು, ನಾನು ಊರಿಗೆ ಬಂದೆ.

## (೨೦) ಕಪಿ ಹಾರಿದ ಕಥೆ

ಶ್ರೀರಾಮನು ಲಂಕೆಯಿಂದ ಬಂದ ಮೇಲೆ, ಜನಕ ಮಹಾರಾಜನಿಗೆ ಮಗಳನ್ನೂ ಅಳಿಯನನ್ನೂ ನೋಡಬೇಕೆನ್ನಿಸಿ ಅವರನ್ನು ಬರಹೇಳಿ ಕಳುಹಿಸಿದನು. ಗಂಡಹೆಂಡಿರಿಬ್ಬರೂ ಸಪರಿವಾರರಾಗಿ ಅಲ್ಲಿಗೆ ಹೋದರು. ಬಹು ದಿನಕ್ಕೊಮ್ಮೆ ಬಂದರೆಂದು ಜನಕ ಮಹಾರಾಜನು ಬೇಕಾದ ಔತಣಮಾಡಿಸಿದನು. ಹನ್ನೆರಡು ಜಾತಿ ಗೊಜ್ಜು, ಹದಿನಾರು ಜಾತಿ ಪಲ್ಯ, ಆರು ಜಾತಿ ಹುಳಿ, ಮೂರು ಜಾತಿ ತೊವ್ವೆ, ಐದು ಜಾತಿ ಪಾಯಿಸ, ಏಳು ಜಾತಿ ಅನ್ನ, ಪಂಚಭಕ್ಷ್ಯ, ಪರಮಾನ್ನ, ಎಲ್ಲ ಮಾಡಿಸಿ, ಎಲ್ಲರಿಗೂ ಒಂದೇ ಸಮನಾಗಿ ಚೌಕದೆಡೆ ಮಾಡಿಸಿ ಎಲ್ಲರನ್ನೂ ಕರೆದು ಕರೆದು ತಾನೇ ಕೈಕಾಲಿಗೆ ಬಿಸಿನೀರು ಕೊಟ್ಟು ಕರೆದುಕೊಂಡು ಹೋಗಿ ಎಲೆ ಮುಂದೆ ಕೂಡಿಸಿದನು. ಜನಕರಾಜನ ಅರಮನೆಯ ಊಟದ ಮನೆಯೆಂದರೆ ಕೇಳಬೇಕೆ? ಸುಗ್ರೀವ, ಜಾಂಬವಂತ, ನಳ, ನಹುಷರಿಂದ ಹಿಡಿದು ಸಣ್ಣ ಪುಟ್ಟ ಕಪಿಗಳೆಲ್ಲರಿಗೂ ಅಲ್ಲಿಯೇ ಸ್ಥಳವಾಯಿತು. ಜನಕರಾಜನು ಒಂದು ಕಡೆಯಿಂದ ಆಪೋಶನ ಹಾಕಿಕೊಂಡು ಬರುತ್ತಿದ್ದಾನೆ. ಅಷ್ಟರಲ್ಲಿ ಒಂದು ವಿಚಿತ್ರ ನಡೆದುಹೋಯಿತು. ಒಂದು ಮೂಲೆಯಲ್ಲಿ ಕುಳಿತಿದ್ದ ಒಂದು ಸಣ್ಣ ಕಪಿಯು ಅಷ್ಟಗಲದ ಎಲೆಯಲ್ಲಿ ಬಡಿಸಿರುವ ಅಡಿಗೆಯನ್ನೆಲ್ಲ ನೋಡಿ ಬೆರೆತು ಹೋಯಿತು. ಒಂದೊಂದಾಗಿ ನೋಡಿಕೊಂಡು ಚಿಟ್ಲಕಾಯಿ (?) ಗೊಜ್ಜಿನ ಬಳಿಗೆ

ಬಂದು, "ಇದೇನೋ ಹೊಸ ತರಹ?" ಎಂದು ಮುಟ್ಟಿತು. ಅದು ಚೆನ್ನಾಗಿ ಹುರಿದಿತ್ತು. ಅದರಿಂದ ಅದು ಒಡೆದು ಚಟ್ಟನೆ ಮೇಲಕ್ಕೆ ಹಾರಿತು. "ನಾನು ರಾಮ ಭಂಟ, ಲಂಕಾ ಪಟ್ಟಣಕ್ಕೆ ಹೋಗಿ ಬಂದವನು. ನನ್ನ ಮುಂದೆ ಸೀನೇ?" ಎಂದು ಅದು ತಾನೂ ಹಾರಿತು. ಮಗ್ಗುಲಲ್ಲಿದ್ದ ಕಪಿಗೂ ಹಾಗೇ ಎನ್ನಿಸಿ ಅದು ತಾನೂ ಹಾರಿತು. ಅದನ್ನು ನೋಡಿ ಅದರ ಮಗ್ಗುಲಲ್ಲಿದ್ದುದು, ಅದನ್ನು ನೋಡಿ ಇನ್ನೊಂದು, ಹೀಗೆ ಕಪಿಗಳೆಲ್ಲವೂ ಪುಟ ಪುಟನೆ ನೆಗೆದುವು. ಸುಗ್ರೀವನೂ ನೆಗೆದ. ಹನುಮಂತನೂ ನೆಗೆದ. ರಾಮನೂ ಸೀತೆಯೂ ಇದೇನು ಎಂದು ಕಕ್ಕಾಬಿಕ್ಕಿಯಾಗಿ ನೋಡುತ್ತಿದ್ದಾರೆ. ಕೊನೆಗೆ ವಿಚಾರಿಸಿ ಚೆನ್ನಾಯ್ತು ಎಂದು ತಲೆ ಬಗ್ಗಿಸಿಕೊಂಡರಂತೆ. ಕಥೆ ಕಾಡಿಗೆ ಹೋಯ್ತು, ನಾನು ಊರಿಗೆ ಬಂದೆ.

## (೨೧) ಹೆಂಟೆಗೊದ್ದನ ಕಥೆ

ಮಾರಿ ಬಂದು ಊರು ತೊಡೆದುಕೊಂಡು ಹೋದಳು. ಊರೆಲ್ಲ ಪಾಳು ಬಿದ್ದು ಒಂದು ಹೆಂಟೆಗೊದ್ದನಿಗೆ ಆ ಹಾಳೂರು ದೊರೆತನ ಸಿಕ್ಕಿತು. ಅದು "ನಾನು ದೊರೆ. ನಾನು ಎಲ್ಲರ ಹಾಗೆ ಹೆಂಟೆಗೊದ್ದನ್ನೇ ರಾಣಿ ಮಾಡಿಕೊಳ್ಳುವುದೇ?" ಎಂದುಕೊಂಡು, ಒಂದು ಬೆಕ್ಕು, ಒಂದು ಇಲಿ, ಒಂದು ಕೊಕ್ಕರೆ, ಒಂದು ತಿಗಣೆ, ಹೀಗೆ ನಾಲ್ವರನ್ನು ಮದುವೆಮಾಡಿಕೊಂಡಿತು. ಒಂದು ದಿನ ದೊರೆಯು ಮುತ್ತಿನ ಅಂಗಿ ಇಕ್ಕಿಕೊಂಡು, ಪಚ್ಚೆ ಷರಾಯಿ ತೊಟ್ಟುಕೊಂಡು, ವಜ್ರದ ಕುಲಾವಿ ಹಾಕಿಕೊಂಡು ಕೂಡಿದ ಸಭೆಯಲ್ಲಿ ಕುಳಿತಿದ್ದನು. ಆಗ ಎರಡನೆಯ ಹೆಂಡಿತಿ ಇಲಿ ಸಿಂಗಾರ ಮಾಡಿಕೊಂಡು ಸಂತೆಗೆ ಹೊರಟಳು. ಆಗ ದೊರೆಯು "ಚಟ್ಟ ಮುಖದ ಬಾಲೆ! ಮುತ್ತಿನಷ್ಟು ತುರುಬು ಕಟ್ಟಿಕೊಂಡು ಎತ್ತಲಾಗಿ ಹೊರಟೆ?" ಎಂದು ಕೇಳಿದನು. ಇಲಿಗೆ ಕೋಪ ಬಂದು "ನಿನ್ನ ಪುರುಕಲು ಮೈಗೆ ಎಣ್ಣೆ ತರೋಕೆ ಸಂತೆಗೆ ಹೊಂಟಿದ್ದೇನೆ" ಎಂದು ಸರಸರನೆ ಹೊರಟುಹೋದಳು. ದೊರೆಗೆ ಕೋಪಬಂದರೂ ಸಭೆ ಮುಗಿಯುವವರೆಗೂ ಸುಮ್ಮನಿದ್ದು, ಆಮೇಲೆ ತನ್ನ ಕೊನೇ ಹೆಂಡಿತಿ ತಿಗಣೆ ಮನೆಗೆ ಹೋಗಿ "ನೋಡಿದೆಯಾ ನೋಡಿದೆಯಾ ನನ್ನ ಕೊನೇ ರಾಣಿ! ತುಂಬಿದ ಸಭೇಲಿ ನಾನು ಕುಳಿತಿದ್ದು ಆ ನಿನ್ನ ಸವತಿ ಇಲೀನ ಎಲ್ಲಿಗ್ಹೊರಟೆ ಎಂದು ಕೇಳಿದರೆ, ನಿನ್ನ ಪುರುಕಲು ಮೈಗೆ ಎಣ್ಣೆ ತರೋಕೆ ಹೊರಟಿದ್ದೇನೆ ಎಂದುಬಿಟ್ಟಳಲ್ಲಾ!" ಎಂದನು. ಅವಳು "ಸರಿ. ನನ್ನಂದಾಳು, ನಮ್ಮಮ್ಮನಂದಾಳು, ನಿನ್ನನ್ನದೆ ಬಿಟ್ಟಾಳೆ?" ಎಂದಳು. ಕೊಕ್ಕರೆಯೂ ಹಾಗೇ ಎಂದಳು. ಕೊನೆಗೆ ಬಂದು ಹಿರೀರಾಣಿಯಲ್ಲಿ ಅತ್ತು ಗೋಳಾಡಿಕೊಂಡನು. ಅವಳು "ಇರಲಿ, ಇಲ್ಲಿರು. ನಾನು ಅವಳಿಗೆ ಬುದ್ಧಿ ಕಲಿಸುತ್ತೇನೆ" ಎಂದು ಬಿಂಕದಿಂದ ಕುಳಿತುಕೊಂಡಳು. ಅರಸನೂ ಅಲ್ಲಿಯೇ ಕುಳಿತುಕೊಂಡಿತು. ಆ ವೇಳೆಗೆ ಸಂತೆಯಿಂದ ಇಲಿಯೂ ಬಂದು ಇವರೆಲ್ಲ ಕುಳಿತಿರುವ ರೀತಿಯನ್ನು ಕಂಡು ಏನೋ ಇದೆಯೆಂದುಕೊಂಡು ಹಾಗೇ ಹೊರಟಳು. ಆದರೂ "ಗಂಡ, ದೊರೆ, ಕಂಡೂ ಕಾಣದ ಹಾಗೆ ಹೋಗೋದು ಹ್ಯಾಗೆ?" ಎಂದುಕೊಂಡು, ಅತ್ತ ತಿರುಗಿ ಬಂದು ಎಲ್ಲರಿಗೂ ನಮಸ್ಕಾರ ಮಾಡಿದಳು. ಬೆಕ್ಕು ಅದೇ ಸಮಯ ಸಾಧಿಸಿ ಅದನ್ನು ಹಿಡಿದು ನುಂಗಿಕೊಂಡಿತು. ಅದಕ್ಕಾದ ಅವಸ್ಥೆಯನ್ನು ಕಂಡು ಮಿಕ್ಕವೆಲ್ಲ ಹೇಳದೆ ಕೇಳದೆ ಪರಾರಿಯಾದುವು. ಕಥೆ ಕಾಡಿಗೆ ಹೋಯ್ತು, ನಾನು ಊರಿಗೆ ಬಂದೆ.

## (೨೨) ಕುರುಡರ ಕಥೆ

ಮೂವರು ಕುರುಡರು ಹೋಗಿ ಒಬ್ಬ ದೊರೆಯನ್ನು ಕಂಡು "ತಮಗೆ ಜೀವನಕ್ಕೆ ಅನುಕೂಲ ಮಾಡಿಕೊಡಬೇಕು" ಎಂದು ಕೇಳಿಕೊಂಡರು. ದೊರೆಯು "ನೀವು

ಯಾರು? ನಿಮಗೆ ಏನೇನು ಬರುತ್ತದೆ?" ಎಂದು ಕೇಳಿದನು. ಮೊದಲನೆಯವನು "ನಾನು ಅಶ್ವಪರೀಕ್ಷೆ ಬಲ್ಲೆ" ಎಂದನು. ಎರಡನೆಯವನು "ನಾನು ರತ್ನ ಪರೀಕ್ಷಕ" ಎಂದನು. ಮೂರನೆಯವನು "ನಾನು ಮನುಷ್ಯ ಪರೀಕ್ಷೆಯಲ್ಲಿ ಗಟ್ಟಿಗ" ಎಂದನು. ದೊರೆಗೆ ನಂಬಿಕೆ ಬರಲಿಲ್ಲ. "ಇರಲಿ" ಎಂದು ಅವರಿಗೆ ಒಂದು ವರಹ ಸಂಬಳ ಚತ್ರದೂಟ ಎಂದು ಗೊತ್ತುಮಾಡಿದನು. ಕುರುಡರು ಸುಖವಾಗಿದ್ದರು.

ಒಂಧು ದಿನ ಒಬ್ಬ ಕುದುರೆಯ ವ್ಯಾಪಾರಿಯು ಭಾರಿಯ ಪಂಚರಂಗಿ ಕುದುರೆಯೊಂದನ್ನು ಮಾರಾಟಕ್ಕೆ ತಂದನು. ಬಲು ಚೆಂದುಳ್ಳ ಕುದುರೆಯನ್ನು ಎಲ್ಲರೂ ಮೋಹಿಸಿದರು. ಅರಮನೆಯ ಅಶ್ವಪರೀಕ್ಷಕನು "ಮಹಾಸ್ವಾಮಿ! ಹದಿನೈದು ಸಾವಿರ ಕೊಡಬಹುದು" ಎಂದನು. ಅರಸನ ಮಂತ್ರಿಯು ಮಾತನಾಡಿ ಹತ್ತು ಸಾವಿರಕ್ಕೆ ಗೊತ್ತುಮಾಡಿದನು. ಇನ್ನೇನು ಹಣ ಕೊಟ್ಟುಬಿಡಬೇಕು, ಅಷ್ಟರಲ್ಲಿ ಕುರುಡನ ನೆನಪಾಗಿ ಅವನನ್ನು ಕರೆಸಿ "ಈ ಕುದುರೆಯನ್ನು ತೆಗೆದುಕೊಳ್ಳಬಹುದೇ? ನೋಡು" ಎಂದನು. ಕುರುಡನು ಅದರ ಮೈಯ್ಯೆಲ್ಲಾ ಸವರಿ, "ಇದು ಕುರುಡು ಕಾಸಿಗೆ ಕೊಟ್ಟರೂ ಬೇಡಿ. ಮಹಾಸ್ವಾಮಿ!" ಎಂದನು. ಅರಸನಿಗೆ ಆಶ್ಚರ್ಯವಾಗಿ "ನೀನು ಹಾಗೆನ್ನಲು ಕಾರಣವೇನು?" ಎಂದು ಕೇಳಿದನು. ಕುರುಡನು "ಸಾಕ್ಷಿ ತೋರಿಸುತ್ತೇನೆ" ಎಂದು ಹೇಳಿ ಅದರ ಹೊಟ್ಟೆಯನ್ನು ಸವರುತ್ತಾ ಒಂದು ಕಡೆ ಬೆರಳು ಔಕಿದನು. ಕೂಡಲೆ ಕುದುರೆಯು ಚಂಗನೆ ಹಾರಿ ಹಿಂಗಣ್ಣಿ ಹೊಡೆಯಿತು. "ನೋಡಿದಿರಾ ಮಹಾಸ್ವಾಮಿ! ಇದನ್ನು ತಮ್ಮ ಬಳಿಗೆ ಯಾರೋ ಶತ್ರುಗಳು ಕಳುಹಿಸಿದ್ದಾರೆ" ಎಂದನು. ಕುದುರೆಯ ವ್ಯಾಪಾರಿಯನ್ನು ಹಿಡಿದು ಕಟ್ಟಿ ಹೊಡೆದು ಬಡಿದು ಮಾಡಲು ಕುರುಡನ ಮಾತು ನಿಜವಾಯಿತು. ಕುರುಡನಿಗೆ ನಾಲ್ಕು ವರಹ ಸಂಬಳವಾಯಿತು.

ಇನ್ನೊಂದು ಸಲ ಒಬ್ಬ ರತ್ನ ವ್ಯಾಪಾರಿಯು ಒಂದು ರತ್ನವನ್ನು ಅರಸನ ಬಳಿಗೆ ಮಾರಾಟಕ್ಕೆ ತಂದನು. ಅದರ ಕಾಂತಿ, ನೀರೋಟ ಕಂಡು ಎಲ್ಲರೂ ಆಶ್ಚರ್ಯ ಪಟ್ಟುಹೋದರು. ಅರಮನೆಯ ಸರಾಫನು ಬಂದು ಪರೀಕ್ಷಿಸಿ "ಇದಕ್ಕೆ ಅರ್ಧ ಲಕ್ಷ ಕಣ್ಣುಮುಚ್ಚಿಕೊಂಡು ಕೊಡಬಹುದು" ಎಂದನು. ಅರಸನಿಗೆ ಕುದುರೆಯ ವ್ಯಾಪಾರದ ನೆನಪಾಗಿ, ಈ ಸಲವೂ ಕುರುಡನನ್ನು ಕರೆಯಿಸಿ "ಈ ರತ್ನದ ಬೆಲೆ ಕಟ್ಟು" ಎಂದನು. ಕುರುಡನು ಅದನ್ನು ಮುಟ್ಟಿ ನೋಡುತ್ತಾ ಅಷ್ಟು ಹೊತ್ತು ಕೈಯಲ್ಲಿಟ್ಟುಕೊಂಡಿದ್ದು "ಸರಿ. ಕವಡೆಯೂ ಬಾಳದು ಈ ಕಲ್ಲು" ಎಂದು ಎಸದನು. ಅರಸನು ಆಶ್ಚರ್ಯಪಟ್ಟು "ಅದು ಹೇಗೆ?" ಎನ್ನಲು, "ಮಹಾಸ್ವಾಮಿಯವರು ಒಪ್ಪಿದರೆ ಇದರ ಪರೀಕ್ಷೆ ತೋರಿಸುತ್ತೇನೆ" ಎಂದನು. ದೊರೆಯು ಆಗಬಹುದು ಎನ್ನಲು, ಅದನ್ನು ಏಣಿನ ಮೇಲಿಟ್ಟು ಹೊಡೆಯಲು ಅದು ಪಳಾರನೆ ಗಾಜಿನಂತೆ ಒಡೆದು ಹೋಯಿತು. ಅರಸನು ಮೆಚ್ಚಿಕೊಂಡು ಅವನಿಗೂ ನಾಲ್ಕು ವರಹ ಸಂಬಳ ಮಾಡಿದನು.

ಇಬ್ಬರಲ್ಲಿ ನಂಬಿಕೆ ಬರಲು, ಮೂರನೆಯ ಕುರುಡನನ್ನು ಪರೀಕ್ಷಿಸಿ ನೋಡಬೇಕೆಂದು ಅರಸನಿಗೆ ಮನಸ್ಸಾಯಿತು. ಪರೀಕ್ಷೆಯಲ್ಲಿ ಅವನೂ ಗೆದ್ದನು. ಅರಸನು ಬಲು ಮೆಚ್ಚಿಕೊಂಡು ಮೂವರಿಗೂ ಹತ್ತು ಹತ್ತು ವರಹ ಸಂಬಳ ಮಾಡಿಕೊಟ್ಟನು. ಕುರುಡರೂ ಸುಖವಾಗಿದ್ದರು. ಕಥೆ ಕಾಡಿಗೆ ಹೋಯಿತು, ನಾನು ಊರಿಗೆ ಬಂದೆ.

* * *

ಇನ್ನು ಈ ಲೇಖನವನ್ನು ಮುಗಿಸುವ ಮೊದಲು ಎರಡು ಮಾತನಾಡೋಣ. ಈ ಕಥೆಗಳಲ್ಲಿ ಕೆಲವಕ್ಕೆ ಅಲ್ಲಲ್ಲಿಯೇ ಸೂಕ್ಷ್ಮವಾದ ಟಿಪ್ಪಣಿಗಳನ್ನು ಬರೆದಿದ್ದೇವೆಯಾಗಿ ಹೆಚ್ಚು ಹೇಳಬೇಕಾಗಿಲ್ಲ. ಒಟ್ಟಿನಲ್ಲಿ ಕಥೆಗಳನ್ನು ಎಂಗಡಿಸಿ, ಅವುಗಳಲ್ಲಿ ಕಾಣಬರುವ ಮನೋಭಾವನೆಗಳು, ಸಿದ್ಧಾಂತಗಳು, ಕಾರ್ಯಜಾಲಗಳು ರೂಪುಗೊಳ್ಳುವ ಕ್ರಮ,—ಇವುಗಳನ್ನು ಪರಿಭಾವಿಸಿ ನೋಡಿರಿ: ಇವುಗಳಿಂದ ಸೂಚಿತವಾಗುವ ಸಂಸ್ಕೃತಿಯೆಂತಹುದು ಎಂಬುದನ್ನು ವಿಚಾರಿಸಿರಿ.

---

# V. ಗಾದೆಗಳೂ ಒಗಟೆಗಳೂ

## ಗಾದೆಗಳು

ಗಾದೆಗಳನ್ನು ಅರಿಯದವರೇ ಇಲ್ಲ; ಆದರೂ ಗಾದೆಯೆಂದರೆ ಏನು ಎಂಬುದನ್ನು ಎಲ್ಲರೂ ಒಪ್ಪುವಂತೆ ಹೇಳುವುದು ಸಾಧ್ಯವಿಲ್ಲ. ಒಟ್ಟಿನಲ್ಲಿ, "ತಲೆತಲಾಂತರದಿಂದ ಶೇಖರವಾಗಿರುವ ಅನುಭವವು ಯಾವನಾದರೊಬ್ಬನ ಬಾಯಲ್ಲಿ ಮಾತಾಗಿ ಹೊರ ಬೀಳುವುದು. ಜನತೆಯು ಆ ಮಾತಿನ ಸೊಬಗಿಗೂ ಅದರ ಹಿಂದಿರುವ ಅನುಭವಕ್ಕೂ ಮೆಚ್ಚಿ ಅದನ್ನು ನಾಣ್ಯವಾಗಿ ಸಂಗ್ರಹಿಸುವುದು. ಜ್ಞಾತಾಜ್ಞಾತವಾಗಿ ಅದನ್ನು ಸಾಧ್ಯವಾದಂತೆಲ್ಲ ಅವರಿವರೆನ್ನದೆ ತಿದ್ದುವರು; ಉಜ್ಜಿ ಹೊಳಪಿಕ್ಕುವರು. ಹೀಗೆ ಸಿದ್ಧವಾದ ಆ 'ಮೊಹರೆ ವಾಕ್ಯ'ವು ಗಾದೆ" ಎಂದು ಹೇಳಬಹುದು.*

ಈ ವಿಚಾರವಾಗಿ ಇನ್ನೊಬ್ಬ ವಿದ್ವಾಂಸರು ಹೀಗೆ ಹೇಳಿದ್ದಾರೆ:—"ಗಾದೆ ಯೆಂದರೆ ಏನು ಎಂಬುದನ್ನು ವಿವರಿಸಲು ಅರಿಸ್ಟೋಟಲನ ಕಾಲದಿಂದ ಪ್ರಯತ್ನಗಳು ನಡೆದಿದ್ದರೂ ಸಫಲವಾಗಿಲ್ಲ. ಹೇಗೆ ಹೇಗೆ ಹೇಳಿದರೂ ಅತಿವ್ಯಾಪ್ತಿ, ಅವ್ಯಾಪ್ತಿಗಳು ತಪ್ಪುವಂತಿಲ್ಲ; ಅಲ್ಲದೆ, ಒಬ್ಬರು ಹೇಳುವುದನ್ನು ಮತ್ತೊಬ್ಬರು ಒಪ್ಪುವುದಿಲ್ಲ. ಅರ್ಲ್ ರಸೆಲ್‌ರು 'ಅನೇಕರ ಅನುಭವ, ಒಬ್ಬನ ಬುದ್ಧಿ' ಎಂದರು. ಮತ್ತೊಬ್ಬರು 'ದೀರ್ಘಕಾಲದ ಅನುಭವದ ಘುಟಿಕೆಗಳು' ಎಂದರು. ಒಟ್ಟಿನಲ್ಲಿ, ಗಾದೆಯು ಸಣ್ಣಗೆ, ನಾಜೋಕಾಗಿ, ಅರ್ಥವತ್ತಾಗಿ, ಉಪ್ಪಿನಕಾಯಿನ ಹಾಗೆ ಇರಬೇಕು; ನೆನೆಪಿನಲ್ಲಿ ಉಳಿಯುವಂತಿರಬೇಕು; ನಾಣ್ಯವಾಗಿರಬೇಕು. ಜನತೆಯಂಗೀಕರಿಸಿ ದಲ್ಲದೆ ಗಾದೆಯು ಗಾದೆಯಾಗುವುದಿಲ್ಲ. ಗಾದೆಯು ಒಬ್ಬನಿಂದಾದುದು ನಿಜ. ಆದರೆ ಅದನ್ನು ಮಾಡಿಸಿದ ಶಕ್ತಿಗಳು ಅನೇಕ."†

ಗಾದೆಗಳು ಹುಟ್ಟಿದುದು ಹೇಗೆಯೆಂಬುದನ್ನು ಸ್ಪಷ್ಟವಾಗಿ ತೋರಿಸುವ ಕಥೆಯೊಂದು ಕಥಾಸರಿತ್ಸಾಗರದಲ್ಲಿ ಬಂದಿದೆ:—

"ಹಿಂದೆ ಸ್ಥೂಲಕೇಶನೆಂಬ ಮುನಿಗೆ ಮೇನಕೆಯಿಂದ ಪ್ರಮದ್ವರೆಯೆಂಬ ಮಗಳು ಹುಟ್ಟಿದಳು. ರುರುವೆಂಬ ಮುನಿಕುಮಾರನು ಅತ್ತಿತ್ತ ತಿರುಗಿ ಅತಿಥಿಯಾಗಿ ಬಂದು ಸ್ಥೂಲಕೇಶನನ್ನು ಆಕೆಯನ್ನು ಮದುವೆಮಾಡಿಕೊಡಹೇಳಿದನು; ತಂದೆಯು ಕೊಡಲೊಪ್ಪಿ

---

* ವೇದ ಸಾಹಿತ್ಯದಲ್ಲಿ ಗಾಥಾ ಎಂಬವುಂಟು. ಇವು ಪದ್ಯರೂಪವಾಗಿದ್ದು, ಯಜ್ಞ, ವಿವಾಹ ಮೊದಲಾದ ವಿಶೇಷ ಸಂದರ್ಭಗಳಲ್ಲಿ ಬರುವುವು. ಇವು ಮಂತ್ರದ ಹಾಗಿದ್ದರೂ ಮನುಷ್ಯ ಕೃತವಾದವು. ಬೌದ್ಧ ಸಾಹಿತ್ಯದಲ್ಲಿ ಗಾಥಾ ಶಬ್ದವು ಕಥಾ ಎಂಬ ಅರ್ಥದಲ್ಲಿ ಬರುತ್ತದೆ.

† Chambers' *Encyclopædia*, Vol. VIII, article: "Proverbs."

ಧಾರೆಯೆರೆಯುವಾಗ ಹಾವು ಕಚ್ಚಿ ಮದುಮಗಳು ಸತ್ತುಹೋದಳು. ಮದುಮಗನು ಗೋಳಾಡಲು ನಿನ್ನ ಆಯುಷ್ಯದಲ್ಲಿ ಅರ್ಧವನ್ನು ಕೊಟ್ಟು ಮಡದಿಯನ್ನು ಬದುಕಿಸಿ ಕೊಳ್ಳೆಂದು ಆಕಾಶವಾಣಿ ನುಡಿಯಿತು. ಅದರಂತೆ ರುರುಕುಮಾರನು ತನ್ನ ಅರೆ ಆಯುವನ್ನು ಕೊಡಲು ಪ್ರಮದ್ವರೆಯು ಬದುಕಿಕೊಂಡಳು. ತಂದೆಯು ಸಂತೋಷ ದಿಂದ ಮಗಳನ್ನು ಮದುವೆಮಾಡಿಕೊಟ್ಟನು. ಅದುಮೊದಲು ಯಾವ ಹಾವನ್ನು ಕಂಡರೂ ಹೆಂಡಿರನ್ನು ಕೊಂದೀತೆಂದು ಗಂಡನು ಕೊಲ್ಲುತ್ತಾ ಬಂದನು. ಹೀಗಿರುವಲ್ಲಿ ಹೊಡೆಯಬಂದ ಮುನಿಗೆ ಒಳ್ಳೆಯೊಂದು, 'ಆಯ್ಯಾ! ಹಾರುವಾ! ಹಾವಿಗೆ ಮುನಿದು ಒಳ್ಳೆಯನ್ನು ಕೊಲ್ಲುವೆ. ನಿನ್ನ ಹೆಂಡಿರನ್ನು ಕಚ್ಚಿದ್ದು ಹಾವು, ಒಳ್ಳೆಯಲ್ಲ, ಸಂಜೆರುವುದು ಹಾವಿಗೆ, ಒಳ್ಳೆಗಲ್ಲ' ಎಂದಿತು, ಇತ್ಯಾದಿ."*

"ಹಾವಿಗೆ ಮುನಿದು ಒಳ್ಳೆಯನ್ನು ಕೊಲ್ಲುವೆ" ಎಂಬ ಗಾದೆಗೆ ಸಂವಾದಿ ಯಾಗಿ ನಮ್ಮಲ್ಲಿ "ಅತ್ತೆಯ ಮೇಲಿನ ಕೋಪ ಕೊತ್ತಿಯ ಮೇಲೆ" ಎಂಬ ಗಾದೆ ಯುಂಟು. ಆದರೆ ಆ ಗಾದೆಯ ಹಿಂದೆ ಯಾವುದೂ ಕಥೆಯಿದ್ದಂತೆ ತೋರುವುದಿಲ್ಲ.

ಕನ್ನಡದ ಗಾದೆಯೊಂದರ ಹಿಂದಿರುವ ಕಥೆಯನ್ನೂ ನೋಡೋಣ:—

"ಒಬ್ಬ ದರಿದ್ರನು ತನ್ನ ಮನೆಯಲ್ಲಿ ದಿನದಿನವೂ ರಾಗಿಯ ಹಿಟ್ಟನ್ನು ತಿಂದು ತಿಂದು ಬೇಸರಗೊಂಡನು. ಅತ್ತೆಯ ಮನೆಗಾದರೂ ಹೋದರೆ ಅಲ್ಲಾದರೂ ಒಳ್ಳೆಯ ಊಟವು ಸಿಕ್ಕೀತೆಂದು ಚಪಲಗೊಂಡು ಹೆಂಡತಿಯೊಡನೆ ತನ್ನ ಆಸೆಯನ್ನು ಹೇಳಿ ಕೊಂಡನು. ಅವಳು ಆಗಬಹುದೆಂದು ದಾರಿಯ ಬುತ್ತಿಗೆಂದು ರಾಗಿಯ ರೊಟ್ಟಿ ಯನ್ನು ಕಟ್ಟಿಕೊಟ್ಟಳು. ಇವನು ಅತ್ತೆಯಮನೆಗೆ ಹೋಗಲು, ಮನೆಯವರೆಲ್ಲ ಸಂಭ್ರಮ ದಿಂದ ಉಪಚರಿಸಿ, ಬಗೆಬಗೆಯ ಅಡುಗೆಗಳನ್ನು ಮಾಡಿದರು. ಇವನು 'ಈ ದಿನ ವಾದರೂ ರಾಗಿಹಿಟ್ಟು ತಪ್ಪಿತು' ಎಂದು ಸಂತೋಷವಾಗಿ ಊಟಮಾಡುತ್ತಿರಲು ಅತ್ತೆಯು ಶಾವಿಗೆಯನ್ನು ತಂದು ಬಡಿಸಿದಳು. ಅಳಿಯನು ನೋಡುತ್ತಾನೆ: ಅದು ರಾಗಿಯ ಹಿಟ್ಟಿನಿಂದ ಮಾಡಿದುದು. ಆಗ ಅವನಿಗೆ ರೇಗಿಹೋಗಿ 'ಮನೆಯಲ್ಲಿದ್ದರೆ ಲಿಂಗಾಕಾರ, ಹಾದಿ ಹಿಡಿದರೆ ಚಕ್ರಾಕಾರ, ಇಲ್ಲಿಗೂ ಬಂದೆಯ ಜಡೆಶಂಕರ' ಎಂದನಂತೆ!"†

ಈ ಗಾದೆಗೆ ಸಂವಾದಿಯಾಗಿರುವ "ಆನೆಯಾದರೂ ಸೊಪ್ಪು ಮೇಯ್ಯುವುದು ತಪ್ಪದು," "ರಾಮೇಶ್ವರಕ್ಕೆ ಹೋದರೂ ಶನೈಶ್ಚರ ಬಿಡದು," "ಪಾಪಿ ಸಮುದ್ರ ಹೊಕ್ಕರೂ ಮೊಳಕಾಲುದ್ದ ನೀರು" ಎಂಬ ಗಾದೆಗಳನ್ನೂ ಸೋಮೇಶ್ವರ ಶತಕದಲ್ಲಿರುವ "ಪಡೆದಷ್ಟಲ್ಲದೆ ಬಪ್ಪುದೇ?" ಎಂಬ ಕವಿವಾಕ್ಯವನ್ನೂ ಹೋಲಿಸಿ ನೋಡಿರಿ.

ಈ ಗಾದೆಗಳು ಅನುಭವದ ತಿರುಳು ಎಂಬುದನ್ನು ತೋರಿಸುವ ಗಾದೆಯೂ ಒಂದುಂಟು. "ವೇದ ಗಾದೆಯ ಮಾತು, ಶಾಸ್ತ್ರ ತಿಳಿದವರ ಮಾತು, ಪುರಾಣ

---

* "ಕನ್ನಡ ಕಥಾಸರಿತ್ಸಾಗರ," ಎರಡನೆಯ ಲಂಬಕ.

† ಪಂಚತಂತ್ರ ಮೊದಲಾದ ನೀತಿಶಾಸ್ತ್ರಗಳಲ್ಲಿ ಬರುವ ಶ್ಲೋಕರೂಪವಾದ ಗಾದೆಗಳನ್ನೂ ಅವಕ್ಕೆ ಅರ್ಥವಾದದಂತೆ ಬರುವ ಕಥೆಗಳನ್ನೂ ಹೋಲಿಸಿರಿ.

ಪುಂಡರ ಮಾತು" ಎಂಬ ಈ ಗಾದೆಯಲ್ಲಿ ವೇದಮಂತ್ರಗಳು ಅನುಷ್ಠಾನ ಸಾದೃಶ್ಯದಿಂದ ಪಡೆಯುವ ಸಿದ್ಧಿಯನ್ನು ಕುರಿತು ಹೇಳುವ ಮಾತುಗಳು ಎಂಬುದನ್ನು ಎಷ್ಟು ಚೆನ್ನಾಗಿ ಚಿತ್ರಿಸಿದೆ! ಶ್ರೀಮಂತನೊಬ್ಬನು ಯೇಸುವಿಗೆ ಒಂದು ನಾಣ್ಯವನ್ನು ತೋರಿಸಿ, "ಗುರುವೇ! ಇದನ್ನು ಯಾರಿಗೆ ಕೊಡಲಿ?" ಎಂದು ಕೇಳಿದನಂತೆ. ಆತನು "ನಾಣ್ಯದಮೇಲೆ ಯಾರ ಮುದ್ರೆಯಿದೆಯೋ ಅವರಿಗೆ ಅದನ್ನು ಕೊಡು" ಎಂದನಂತೆ. ಹಾಗೆ ಆ ವೇದದ ಮಂತ್ರಗಳು. ಆಯಾ ಅನುಭವವು ಬೇಕಾದವರಿಗೆ ಮಾತ್ರ ಬೇಕಾದವು. ಹಾಗಲ್ಲದೆ "ಕಟುಕರ ಅಂಗಡಿಯಲ್ಲಿ ಬಸವನ ಪುರಾಣ ಹೇಳು"ವುದಕ್ಕೆ ಹೊರಟವಲ್ಲ. ಒಂದುವೇಳೆ ಹಾಗಲ್ಲದೆ "ಕುರುಡು ಹೆಣ್ಣಿಗೆ ಕುಂಟು ಗಂಡ" ಎಂಬಂತೆ ಮಾಡೋಣವೆಂದು ಹೊರಟರೆ, ಅದು "ಒಲ್ಲದ ಗಂಡನಿಗೆ ಮೊಸರಲ್ಲಿ ಕಲ್ಲು" ಎಂಬಂತಾಗುವುದು. ಇದಿಷ್ಟು ವಿಸ್ತಾರವಾದ ಅನುಭವವೆಲ್ಲ "ವೇದ ಗಾದೆಯ ಮಾತು" ಎಂಬ ಒಂದು ಗಾದೆಯಲ್ಲಿ ಪಾಕವಿಳಿದಿರುವುದು. ಹೀಗೆ ಸಂದರ್ಭೋಚಿತವಾಗಿ, ವಿಸ್ತಾರವಾದ ಅನುಭವ ಪ್ರಪಂಚವೊಂದನ್ನು ಚೊಕ್ಕವಾದ ಪುಟ್ಟ "ಮೊಹರೆ ವಾಕ್ಯ"ಗಳಲ್ಲಿ ಗಾದೆಯು ಹೇಳುವುದು. ಆ ಗಾದೆಯು ವೇದಕ್ಕೆ ಸಮಾನವೆಂದು ಜನತೆಯು ಅಂಗೀಕರಿಸುವುದು.

"ಬಾಳೆ ಬಗೆದುಹಾಕು; ತೆಂಗು ತೇಲಿಹಾಕು,"* "ಜೇನು ಅಳಿದವನು ಕೈ ನೆಕ್ಕದಿರುವನೇ?" "ಅಂಬಲಿ ಕುಡಿದವನು ಅಳಿಗೆ ಹೊತ್ತುಕೊಂಡು ಹೋದಾನೆ?" ಮುಂತಾದ ಗಾದೆಗಳನ್ನೂ ಕುರಿತು ಪರ್ಯಾಲೋಚಿಸಿರಿ.

ಇದರ ಜೊತೆಗೆ ಗಾದೆಗಳನ್ನು ಉದಾಹರಿಸುವುದಕ್ಕೋಸ್ಕರವೇ ನಡೆದುವೋ ಎಂದು ಆಶ್ಚರ್ಯವನ್ನು ಉಂಟುಮಾಡುವಂತಹ ಸಂದರ್ಭಗಳು ಕನ್ನಡ ನಾಡಿನ ಇತಿಹಾಸದಲ್ಲಿ ಅನೇಕವಾಗಿವೆ. "ಉಪ್ಪಿಟ್ಟವನನ್ನು ಮುಪ್ಪಿನ ತನಕ ನೆನೆ" ಎಂಬುದೊಂದು ಗಾದೆ. ನಾವು ಶಾಸನಗಳನ್ನು ನೋಡುತ್ತ ಬಂದರೆ, ಈ ಗಾದೆಯನ್ನು ಸಂಪೂರ್ಣವಾಗಿ ಇರಲಿ—ಅದಕ್ಕಿಂತಲೂ ಹೆಚ್ಚಾಗಿ (ಸಾಧ್ಯವಾದರೆ)—ಪಾಲಿಸಿರುವವರೂ ಉಂಟು ಎಂಬುದು ತಿಳಿಯುವುದು.

ಹೊಯ್ಸಳ ದಂಡಾಧೀಶನಾದ ಕುಮಾರ ಲಕ್ಷ್ಮನ ಕಥೆಯನ್ನು ನೋಡೋಣ:—

"ಅರಮನೆ ತೊಟ್ಟಿಲೆ, ನೆಗಳ್ದಾದರಮುದು ಬಾಯೆಣ್ಣೆ, ದಾದಿಯೆ ತನ್ನಂತಃಪುರಮೆನೆ
ನೃಪಂ ಪೊರೆದ ಮಗಂ ಕುವರ ಲಕ್ಷ್ಮ ದಂಡಾಧೀಶಂ,

* ವ್ಯವಸಾಯ ಸಂಬಂಧವಾದ ಈ ಜಾತಿಯ ಗಾದೆಗಳ ವಿಚಾರವಾಗಿ "ಮೈಸೂರು ಗೆಜೆಟಿಯರ್" (New Edition, Vol. III, Chap. II, Page 25) ಹೀಗೆ ಹೇಳಿದೆ:—"The experience of centuries finds crystallised expression in various agricultural proverbs and sayings."

ಆಳರಸಂಬ ಭೇದಮಿನಿತಪ್ಪೊಡಮಿಲ್ಲಿವರಲ್ಲಿ ತೇಜಮುಂ ।
ಲೀಲೆಯ ರಾಜ್ಯಚಿಹ್ನಮುಮವೀರ್ವರೊಳಂ ಸಮನೆಂದುವೆಂಬಿನಂ ॥
ಪಾಳಿಸುವರ್ಥದಾವಳಿಯುಮಂ ಪರಮೋತ್ಸವದಿಂದೆ ವೀಬ ।
ಲ್ಲಾಳ ನೃಪಾಳನುಂ ಕುವರಲಕ್ಷ್ಮ ಚಮೂಪನುಮೇಂ ಪುಣ್ಯರೋ ॥

ಧನಮುಂ ಪ್ರಾಣಮುಮೆಂಬಿವಂ ಕುವರಲಕ್ಷ್ಮಂ ವೀರಬಲ್ಲಾಳದೇ ।
ವನ ದಾನೋನ್ನತಿಗಂ ಜಯೋನ್ನತಿಗಮಿಾಯಲ್ ಪೂಣ್ದು ಮುಂದಿಟ್ಟು ರಾ ॥
ಮನ ಬೀಡಿಂಗಣುವಂ ಯುಮಾತ್ಮಜನ ಬೀಡಿಂಗರ್ಜುನಂ ಚಂದ್ರಜೂ ।
ಟನ ಬೀಡಿಂಗೆ ಕುಮಾರನಿರ್ಪ ತೆರದಿಂದಿರ್ದ್ದಪ್ಪನೇಂ ಧೀರನೋ ॥*

ಮುತ್ತಿನ ಪೆಂಡೆಯುಂ ಮುರಹರಂ ಕನಕಾದ್ರಿಯೊಳಂದು ಶೇಷನಂ ।
ಸುತ್ತಿದ ಭಂಗಿಯಿಂದಮೆಸೆದಿರ್ಪುದು ಪೊನ್ನ ತೊಡರ್ ತದದ್ರಿಯಂ ॥
ಸುತ್ತಿದ ಕರ್ಣಿಕಾರ ವನಮಾಲೆವೊಲಿರ್ಪುದು ಕೊಟ್ಟ ಭಾಷೆಗೆ ।
ಚ್ಚೊತ್ತಿದ ಮಾಳ್ಕೆಯಿಂ ಕುವರಲಕ್ಷ್ಮ ಚಮೂಪನ ಪಾದಪದ್ಮದೊಳ್ ॥"

ಇಂತಹ ಲಕ್ಷ್ಮನು ಸ್ವಾಮಿಗಾಗಿ "ಗರುಡರೊಡನೆ ಬೆರೆಸಾದಂ"† ಲಕ್ಷ್ಮನಂತಹ ಅಭಿಜಾತರ ಮಾತಂತಿರಲಿ. ಸಾಮಾನ್ಯರೂ ಸ್ವಾಮಿಭಕ್ತಿ ಕೃತಜ್ಞತೆಗಳನ್ನು ಮೆರೆಯುತ್ತಿದ್ದರು ಎಂಬುದಕ್ಕೂ ಹಲವು ನಿದರ್ಶನಗಳಿವೆ. ಈಗ ಒಂದು ಉದಾಹರಿಸೋಣ:—

"ಸ್ವಸ್ತಿ. ನೀತಿಮಾರ್ಗ ಕೊಂಗುಣಿವರ್ಮ ಧರ್ಮಮಹಾರಾಜಾಧಿರಾಜ ಕೋವಳಾಲವರಪುರೇಸ್ವರ ನಂದಗಿರಿನಾಥ ಶ್ರೀಮತ್ ಪೆಮ್ಮನಡಿಗಳ್ ಸ್ವರ್ಗಮೇರಿದ (?) ಏರಿದೊಡೆ ಪೆಮ್ಮಾನಡಿಗಳ ಮನೆಮಗತ್ರಿ ಅಗರಯ್ಯ ನೀತಿಮಾರ್ಗ ಪೆಮ್ಮನಡಿಗೆ ಕಿಬ್ಬಗ್ಟೆಯಾದಂ".‡

ಗಾದೆಗಳಲ್ಲಿ ಒಂದೊಂದು ಕುಲದವರಿಗೆ ಮಾತ್ರ ಸಂಬಂಧಿಸಿದವೂ ಉಂಟು:— "ಅಭ್ಯಾಸವಿಲ್ಲದ ಬ್ರಾಹ್ಮಣ ಔಪಾಸನ ಮಾಡುವುದಕ್ಕೆ ಹೋಗಿ ಗಡ್ಡ ಮಿಾಸೇ ಸುಟ್ಟುಕೊಂಡ," "ಅಪ್ಪಾಭಟ್ಟರ ಸೊಸೆಯಾಗಿ ತಿಪ್ಪಾಭಟ್ಟರ ಮಗಳಾಗಿ ಲವಣ ಎಂದರೆ ಕಾಣೆನೇ ದೊಡ್ಡಮ್ಮ ಸಗಣಿ" ಮೊದಲಾದವು ಬ್ರಾಹ್ಮಣರಿಗೆ ಮಾತ್ರ ಅನ್ವಯಿಸತಕ್ಕವು. "ಶಿವ ಕೊಟ್ಟರೂ ಶಿದ್ದಪ್ಪ ಕೊಡ," "ಬಡದೇವರ ಕಂಡರೆ ಬಿಲ್ಲಪತ್ರೆಯೂ ಭುಸ್ಸೆಂತು" ಮೊದಲಾದವು ವೀರಶೈವರ ಸಂಬಂಧವನ್ನು ತೋರಿಸತಕ್ಕವು. "ಈರುಳ್ಳಿ ಕಾರಾ ನೋಡು ಮಾದೇವೀ ಮೊಕ ನೋಡು," "ಕಬ್ಬಿಸ

* ಇಲ್ಲಿ ಉದಾಹರಿಸಿರುವ ಪದ್ಯಗಳಲ್ಲಿ ಎರಡನೆಯದರ ಪೂರ್ವಾರ್ಧದಲ್ಲಿರುವ ಭಾವವನ್ನು ಗಮನಿಸಿರಿ. ಇಂದಿಯದಲ್ಲಿರುವ ದಾನ ಶಾಸನಗಳಲ್ಲಿ ಬಹುತರವಾಗಿ ಹೀಗೆಂಬೇ "ತನ್ನೊಡೆಯನ ಪುಣ್ಯಕೀರ್ತಿಗಾಗಿ ಮಾಡಿದ ದಾನ"ಗಳನ್ನು ಉಲ್ಲೇಖಿಸುವುವು ಎಂದು ಹೇಳಿದರೆ ತಪ್ಪಿಲ್ಲ.

† ಶಾಸನ: ಬೇಲೂರು, ೧೧೨ & Mysore & Coorg from Inscriptions, Page 104.

‡ ಶಾಸನ, ತಿರುಮಕೂಡ್ಲು ನರಸೀಪುರ, ೯೧.

(ಕಿಬ್ಬಗಂಟೆಯಾಗುವುದೆಂದರೆ ಹೆಣದ ಜೊತೆಯಲ್ಲಿ ತಾನೂ ಸಮಾಧಿಮಾಡಿಸಿಕೊಳ್ಳುವುದು.)

ತೋಟದಲ್ಲಿ ಸೂಲಂಗಿ ಹುಟ್ಟಿದಂಗೆ," "ತೊಂಡೆ ಬಲಿತರೆ ತೊಡೆ ದಪ್ಪವಾದೀತೆ?" ಮೊದಲಾದವು ಹಳ್ಳಿಗರನ್ನು ಗುರುತಿಸುವವು.

ಹಾಗೆಯೇ ಬಹುಮಟ್ಟಿಗೆ ಇತರರು ಕುಲ ಕುಲದವರನ್ನು ಕುರಿತು ಆಡಿ ಕೊಂಡಂತೆ ಕಂಡರೂ ಆಯಾ ಕುಲದ ಮುಖ್ಯ ಲಕ್ಷಣಗಳನ್ನು ಕನ್ನಡಿಸಿದಂತೆ ತೋರುವ ಗಾದೆಗಳೂ ಇವೆ. "ಕೋಮಟಿಗ ಕೊಡ ಬಣಜಿಗ ಬಿಡ," "ಹಸಿದ ಹಾರುವನನ್ನೂ ಉಂಡ ಒಕ್ಕಲಿಗನನ್ನೂ ಕೆಣಕಬೇಡ," "ನರಕಕ್ಕೆ ಹೋದರೂ ನಾಮಧಾರಿ ನಂಬಬೇಡ" ಮೊದಲಾದ ಗಾದೆಗಳು ಇಂತಹವು.*

ಇದರಂತೆ ಬೇರೆ ಬೇರೆ ಕಸಬುಗಳನ್ನು ಕುರಿತು ಹುಟ್ಟಿರುವ ಗಾದೆಗಳೂ ಉಂಟು. "ಮಿಕ್ಕೆಳ್ಳು ಮೃಗಶಿರೇಲಿ ಚೆಲ್ಲು," "ಆರಿದ್ರೆ ಮಳೆಗೆ ಆಗಿರೋ ಉಕ್ಕೆ ಬಿತ್ತಿಬಿಡು," "ಮರಳುಭೂಮಿಗೆ ಹಸಿದ ಮೃತ್ತಿಕೆ," "ಎರೆ ನಂಬಿದೋ ದೊರೆ ನಂಬಿದೋ," "ಅನೂರಾಧೆ ಬಂದರೆ ನಮ್ಮ ರಾಗಿ ನಮ್ಮದು."

ಇವೆಲ್ಲದರ ಜೊತೆಗೆ ಕಾವ್ಯರಾಶಿಯಿಂದಲೂ ಬಂದು ಸೇರಿರುವ "ಕಣ್ಬೇನೆಯ ಕರಡಿಯವೊಲರಚುವಂ ವಾಚಕನೇ?" (ಛಂದೋಂಬುಧಿ), "ದೊರೆಗೆ ಪಿರಿಯರು ಮೊಳರೇ?" (ಪಂಪ ರಾಮಾಯಣ), "ಕೃತ್ರಿಮದ ವಿಷದ ಸೋಂಕಿಗೆ ಗರುಡನಳವಳಿಯೆ ಮತ್ತೆ ರಕ್ಷೆಗೆ ಮಂತ್ರಿಸುವರಾರ್?" (ಜೈಮಿನಿ), "ಕಾಯದಲ್ಪಸುಖಕ್ಕೆ ಘನ ನಿಶ್ರ್ರೇಯಸವ ಕೆಡಿಸುವೆನೆ? ಯಲವದ ಕಾಯಿಗೋಸುಗ ಕಲ್ಪವೃಕ್ಷವ ಕಡಿವನಲ್ಲ" (ಕನ್ನಡ ಭಾರತ), "ತೋರಮಾಣಿಕವೆಂದು ಪಿಡಿದರೆ ಭೂರಿಕೆಂಡವಿದಾಯ್ತು" (ನಳಚರಿತ್ರೆ), "ತಲೆಗೆ ಹೂವ ತಹೆನಲ್ಲದೆ ಹುಲ್ಲ ತರುವೆನೇ?" (ಶಿವಶರಣರ ವಚನಗಳು) ಮೊದಲಾದ ಗಾದೆಗಳೂ ಉಂಟು. ಹಾಗೆಯೇ "ಸಕ್ಕರೆಗುಪ್ಪಂ ಸರಿಮಾಳ್ಪರೇ?" (ಸೋಮೇಶ್ವರಶತಕ) ಎಂಬ ಕವಿವಾಕ್ಯಗಳನ್ನು ಆಶ್ರಯಿಸಿ ಹುಟ್ಟಿದಂತೆ ತೋರುವ "ಹಿಟ್ಟೂ ಬೂದಿಯೂ ಒಂದೇ?" ಎಂಬ ಗಾದೆಗಳೂ ಉಂಟು.

ಅಂತೂ "ಗಾದೆಗಳ ರಾಶಿಯು ದಿನ ದಿನಕ್ಕೂ ಬೆಳೆಯುತ್ತಿದೆ. ಹಳೆದು ಅಳಿದಂತೆಲ್ಲ ಹೊಸ ಹೊಸದು ಹುಟ್ಟಿಬಂದು ತುಂಬುತ್ತಲಿದೆ. ಹಾಡು ಕಥೆಗಳಂತೆ ಹಳೆಯವೂ ಮತ್ತೆ ಹೊಸ ರೂಪದಲ್ಲಿ ಹುಟ್ಟಿಬರುತ್ತಲೂ ಇವೆ. "ಅಲ್ಲಿ ಬಿದ್ದು ಇಲ್ಲಿ ಬಿದ್ದು ಮಗ ಗುಂಡುಕಲ್ಲಾದ" ಎಂಬಂತೆ ಹೋದವು ಹೋಗಿ ಬಂದವು ಬಂದು ಈ ಭಂಡಾರವು ಮಾತ್ರ ಎಂದಿನಂತೆ ಸಮುದ್ರದಂತೆ ಅಪಾರವಾಗಿದೆ" ಎಂದು ನಿಶ್ಶಂಕವಾಗಿ ಹೇಳಬಹುದು.†

* *cf. Mysore Gazetteer* (New Edition), Vol. I, Page 210: "Caste in Proverbs."

† "It is obvious that the greater number of these proverbs which seem to be common property must be of eastern birth. . . . Go back as far as we may, we find the proverb, the fable and the parable working together in the East."—Chambers' *Encyclopædia*, Vol. VIII, article: "Proverbs."

ಪರದೇಶಗಳ ಗಾದೆಗಳು ಕೆಲವನ್ನು ಹೇಳಿ ಈ ಭಾಗವನ್ನು ಮುಗಿಸೋಣ. ಫ್ರಾನ್‌ಸಿನ ಗಾದೆಗಳಿವು: "ಮಾಡಿರುವುದು ನೋಡಿದರೆ ಮಾಡಿದವರ್‍ಯಾರು ಎಂದು ತಿಳಿಯದೆ?" "ನಮ್ಮನ್ನು ಹೊಗಳುವರನ್ನು ಕಂಡರೆ ನಮಗೆ ಇಷ್ಟ: ನಾವು ಹೊಗಳುವರನ್ನು ಕಂಡರೆ ನಮಗೆ ಕಷ್ಟ." "ಸೂರ್ಯನನ್ನೂ ಸಾವನ್ನೂ ಬಿಟ್ಟ ಕಣ್ಣಿಂದ ನೋಡುವರೂ ಉಂಟೆ?" ಚೀನದ ಗಾದೆಗಳಿವು: "ಗಳಿಗೆಯೊಳಿ ಮಾಡಿದ ತಪ್ಪು ಸಾವಿನವರೆಗೂ ಮುಪ್ಪು." "ಆನೆ ಬೇಕು ಎಂದವ ಆಡು ಹಿಡಿದಾನೆ?" "ಸಿರಿತನ ಹೋದರೆ ಬಡತನ ಬಂದಂತೆ ಬಡತನ ಹೋದರೆ ಸಿರಿತನ ಬಂದೀತೆ?"*

### ಒಗಟೆಗಳು

ಗಾದೆಗಳಂತೆಯೇ ಒಗಟೆಗಳೂ ಸರ್ವವ್ಯಾಪಿಗಳಾಗಿವೆ. ಆದರೆ ಗಾದೆಗಳಂತೆ ಇವು ದೈನಂದಿನ ವ್ಯವಹಾರದಲ್ಲಿ ಬೆರೆದುಹೋಗಿವೆಯೆಂದು ಹೇಳಲಾಗುವುದಿಲ್ಲ. ಗಾದೆಗಳು ಊಟ, ಉಪಚಾರಗಳಂತೆ ಬಾಳಿನಲ್ಲಿ ಬೆರೆತಿದ್ದರೆ, ಒಗಟೆಗಳು ಆಟಗಳಂತೆ ಜೀವನದಲ್ಲಿ ಒಂದು ಸ್ಥಾನವನ್ನು ಪಡೆದಿವೆಯೆನ್ನಬಹುದು. ಸುಖದುಃಖಗಳಲ್ಲೆಲ್ಲ ಗಾದೆಗಳು ಬರುತ್ತವೆ. ಆದರೆ ಒಗಟೆಗಳು ಬರುವುದಕ್ಕೆ ಮನಃಪ್ರಸಾದವು ಬೇಕು. ಹೇಳುವವನಿಗೂ ಕೇಳುವವನಿಗೂ ವಿನೋದಪ್ರಿಯತೆಯೂ, ರಸಿಕತೆಯೂ ಬೇಕು. ಜೊತೆಗೆ ಪ್ರಕಟವಾಗಿರುವದನ್ನು ನಿಕಟವಾಗಿ ಮುಚ್ಚಿಟ್ಟು ಹುಡುಕಿ ನೋಡು ಎಂಬ ಆಟವಾಡುವ ಮನೋಭಾವವು ಬೇಕು.

ಮನುಷ್ಯನ ಮನಸ್ಸು ಗಿಡದಂತೆ ಬೇರೆ ಬೇರೆ ಅವಸ್ಥೆಗಳಲ್ಲಿ ಬೇರೆ ಬೇರೆ ಸಾಂಸ್ಕೃತಿಕ ಘಟ್ಟಗಳನ್ನು ತೋರುವುದುಂಟು. ಆದರೂ ಜೀವನಿಗೆ ಸಹಜವಾದ ಚಿತ್ತೂ ಆನಂದವೂ ಎಲ್ಲಾ ಘಟ್ಟಗಳಲ್ಲಿಯೂ ಅಂಶಾಂಶವಾಗಿಯಾದರೂ ವ್ಯಕ್ತವಾಗುತ್ತವೆ. ಈ ಅಂಶಗಳೇ ಪೂರ್ಣವಾಗಿ ಬೆಳೆಗೊಂಡಾಗ ತಾಂತ್ರಿಕ (mystic), ರಸಿಕ (emotional) ಭಾವಗಳಾಗುವುವು. ಈ ಭಾವಬೀಜಗಳು ಕಾಲಕರ್ಮಗಳ ತುಯ್ಯಾಟದಲ್ಲಿ ಸಿಕ್ಕಿ ಆಗಾಗ ಪ್ರಕಟವಾಗುವುವು. ಅಂತಹ ಸಂದರ್ಭದಲ್ಲಿ ಮನಸ್ಸು ಸೃಷ್ಟಿಗೈವ ಹಂಬಲದಿಂದ ಮುಂಬರಿದು ಕಾವ್ಯಸೃಷ್ಟಿಗೆ ಕೈಯಿಕ್ಕುವುದು. ತಂತ್ರಿಯು 'ಕಣ್ಣಿಗೆ ಕಾಣುವುದೆಲ್ಲ ಕಾಣದುಪರ ಒಂದೊಂದು ಗುರುತು' ಎನ್ನುತ್ತ ಅಂತರ್ಮುಖಿಯಾಗಿ ಒಳಸುಗ್ಗಿ ರಹಸ್ಯವನ್ನು ಭೇದಿಸಲು ಯತ್ನಿಸುವನು. ರಸಿಕನು ಆ ಪ್ರಯತ್ನಗಳ ಫಲವನ್ನು, ಒಳಗೆ ಕಂಡುದನ್ನು, ಮತ್ತೆ ಹೊರಗೆ ಹುಡುಕುತ್ತ, ಹುಡುಕುವುದನ್ನು

---

* ಹಿಂದಿನಿಂದ: "ಚೊಚ್ಚಲು ಪೆದ್ದು" ಎಂಬುದು ಇನ್ನೊಂದು ಗಾದೆ. ಇದರಂತೆ ಚೊಚ್ಚಲು ಮಗುವು ಪೆಂಕು; ಅಷ್ಟು ಬುದ್ಧಿವಂತಿಕೆಯುಳ್ಳುದಾಗಿರುವುದಿಲ್ಲ ಎಂದು ನಮ್ಮ ನಂಬಿಕೆ. ಇದಕ್ಕೆ ನಿದರ್ಶನವಾಗಿ, ಇದುವರೆಗೆ ದೊರೆತಿರುವ ಆಧಾರಗಳಿಂದ ಹಿರಿಯ ಮಕ್ಕಳಿಗಿಂತ ಕಿರಿಯ ಮಕ್ಕಳೇ ಹೆಚ್ಚು ಬುದ್ಧಿವಂತರು ಎಂದು ಗೊತ್ತಾಗಿದೆ. ಜೂಲಿಯಸ್ ಸೀಸರ್, ಷೇಕ್ಸ್‌ಪಿಯರ್, ನೆಪೋಲಿಯನ್, ನೆಲ್ಸನ್, ಜಾರ್ಜ್ ವಾಷಿಂಗ್‌ಟನ್, ಅಬ್ರಹಾಂ ಲಿಂಕನ್, ಚಾರ್ಲ್ಸ್ ಡಾರ್ವಿನ್, ಜಿ. ಬಿ. ಷಾ, ಮಾರ್ಷಲ್ ಫೋಷ್ ಮೊದಲಾದವರೆಲ್ಲ ಕಿರಿಯ ಮಕ್ಕಳೇ!

ಬಾಯಲ್ಲಿ ಹೇಳುತ್ತ ಹೇಳಿ ಕೇಳಿ ನಲಿಯುತ್ತ ಬಹಿರ್ಮುಖಿಯಾಗುವನು. ಈ ಅಂತರ್ಮುಖಿಯು ಹೊರಟೆಡೆಯೂ ಬಹಿರ್ಮುಖಿಯು ಬಂದೆಡೆಯೂ ಒಂದೇ ಆಗಿ ಈ ಎರಡೂ ಒಂದೆಡೆ ಸೇರಿ ಅದೇ ಒಂದು ಆಟವಾಗುವುದು. ಇಲ್ಲಿ ಅಂತರ್ಮುಖಿಯ ಸೆಳೆತವು ಹೆಚ್ಚಾಗಿದ್ದು ಬಹಿರ್ಮುಖಿಯ ತುಯ್ದಾಟವು ಸಾಲದಿದ್ದರೆ ಆಗ ಆದ ಶಬ್ದ ಮಯ ಸೃಷ್ಟಿಯು 'ಒಗಟು' ಆಗುವುದು. ಹಾಗಿಲ್ಲದೆ ಬಹಿರ್ಮುಖಿಯ ಪ್ರಭಾವವು ಬಲವಾಗಿದ್ದು ಅಂತರ್ಮುಖಿಯು ಯಥಾಯಥಾ ಇದ್ದರೆ ಅದು ಕಾವ್ಯವಾಗುವುದು. ಜ್ಞಾನಿಗಳ ಕಾವ್ಯವು ಮಂತ್ರೋಪನಿಷತ್ತುಗಳಾಗುವುದೂ, ಭಾವವು ಬಲಿಯದೆ ಭಾಷೆಯು ಬಲಿತವರ ಕಾವ್ಯವು ಜನಪ್ರಿಯವಾದ ಕಾವ್ಯಗಳಾಗುವುದೂ ಹೀಗೆಯೇ! ಒಟ್ಟಿನಲ್ಲಿ ಹುಡುಗಿಯರು ಕವಡೆಯ ಆಟದ ಕೊನೆಯಲ್ಲಿ ತಾವು ಗೆದ್ದ ಕವಡೆಗಳನ್ನು ಮುಚ್ಚಿಟ್ಟು ಸೋತವರನ್ನು ಹುಡುಕಿರೆನ್ನುವಂತೆ, ಆವರಣ ವಿಕ್ಷೇಪಗಳ ಪ್ರಭಾವಕ್ಕೆ ಸಿಕ್ಕಿದರೂ ನಲಿಯುತ್ತಿರುವ ಮನಸ್ಸು, ಮಕ್ಕಳೊಡನೆ 'ತೋಚಿ' ಆಟವಾಡುವ ಹಿರಿಯರಂತೆ, ಇತರರೊಡನೆ ಒಂದು ಕಣ್ಣಾಮುಚ್ಚಾಲೆಯನ್ನು ಆಡುವುದು. ಆ ಕಣ್ಣಾಮುಚ್ಚಾಲೆಯ ಕಾವ್ಯಸ್ವರೂಪವೇ 'ಒಗಟೆ.'

ಹೀಗೆ ಹುಟ್ಟುವ ಈ ಒಗಟೆಗಳು "ಹಗ್ಗ ಹಾಸಿದೆ; ಕೋಣ ಮಲಗಿದೆ" ಎಂಬಂತೆ ಬಹಳ ಸ್ಥೂಲವಾಗಿರಬಹುದು. ಒಬ್ಬನು ಕುಂಬಳ ಬಳ್ಳಿಯನ್ನು ಕಾಣು ತ್ತಾನೆ. ಅದರ ಮಗ್ಗುಲಲ್ಲಿ ಭಾರಿಯ ಕುಂಬಳವು ಕುಳಿತಿರುವುದೂ ಕಣ್ಣಿಗೆ ಬೀಳುತ್ತದೆ. ಅವನಿಗೆ ಆ ಪ್ರಾಕೃತಿಕ ದೃಶ್ಯದರ್ಶನದಿಂದ ಆನಂದ ಪ್ರಾದುರ್ಭಾವವಾಗಿ ವೃತ್ತಿಯು ಅಂತರ್ಮುಖಿಯಾಗುತ್ತದೆ. ಆದರೆ ಯೋಗವಾದುದು ಕ್ಷೇಮವಾಗು ವುದಕ್ಕೆ ಬೇಕಾದ ಪುಣ್ಯವಿಲ್ಲದೆ ಆ ಭಾವವು, ವೃತ್ತಿಯು, ಹೊರಬಿದ್ದು ಲೀಲಾವೃತ್ತಿ ಯಾಗುತ್ತದೆ. ಈ ವೃತ್ತಿಯು ಹೊರಬೀಳುವಾಗ ತನಗೆ ಸಿಕ್ಕಿರುವ ಆನಂದಕಂದವನ್ನು ಹೊರಗೆ ಎಸೆಯುವುದಕ್ಕೆ, ಆ ಕಂದುಕ ಖೇಲನಕ್ಕೆ, ಮತ್ತೊಬ್ಬನನ್ನು ಅಪೇಕ್ಷಿ ಸುತ್ತದೆ. ಇದ್ದುದನ್ನು ಇದ್ದಹಾಗೇ ಎಸೆದರೆ ಯಾರಿಗೆ ತೃಪ್ತಿ? ಆದರಿಂದ ಕಸವನ್ನೂ ರಸಮಾಡುವ ವೃತ್ತಿಯನ್ನು ಆಶ್ರಯಿಸಿ ಲಕ್ಷಣಾವೃತ್ತಿಯಿಂದ ಪದಾರ್ಥಾಂತರವನ್ನು ಆರೋಪಿಸಿ ಬಳ್ಳಿಯನ್ನು ಹಗ್ಗವಾಗಿಯೂ ಕುಂಬಳದ ಹಣ್ಣನ್ನು ಕೋಣವಾಗಿಯೂ ಉತ್ಪ್ರೇಕ್ಷಿಸಿ ಒಂದು ಒಗಟನ್ನು ಮಾಡುತ್ತಾನೆ. ಒಗಟನ್ನು ಹೇಳಿದವನಿಗೆ ಮಾತ್ರ ಸಂತೋಷವೆಂದಲ್ಲ, ಎದುರುಗಡೆಯವನು ಆ ಒಗಟನ್ನು ಒಡೆದು ವಾಸ್ತವಸ್ಥಿತಿ ಯನ್ನು ಊಹಿಸಿ ಸತ್ಯಾರ್ಥವನ್ನು ಕಂಡು ಹಿಗ್ಗುತ್ತಾನೆ. ಹಾಗೂ ಹೀಗೂ ಇಬ್ಬರಿಗೂ ಆನಂದವಾಗುವಂತೆ, ಕ್ರಿಯಾಪ್ರತಿಕ್ರಿಯೆಗಳೆರಡರಲ್ಲೂ ಆನಂದ ಪರ್ಯವಸಾಯಿಯಾಗಿರುವ ವಿನೋದದ ಕಲ್ಪನೆಯು ಈ ಒಗಟೆಯ ಉದ್ದೇಶವು. (ಪುಟ ೪೫, ಹಾಡು ೨೨ ನೋಡಿರಿ).

"ಚಿನ್ನದ ಪೆಟ್ಟಿಗೆಯಲ್ಲಿ ಬೆಳ್ಳಿಯ ಲಿಂಗ" ಎಂಬುದು ಇನ್ನೊಂದು ಒಗಟೆ. ತಿನ್ನುವುದಕ್ಕೆಂದು ಮುಂದಿಟ್ಟುಕೊಂಡಿರುವ ಹಲಸಿನ ತೊಳೆಯ ಬಣ್ಣವಂತೂ ಮನಸ್ಸನ್ನು ಉದ್ಬೋಧಗೊಳಿಸಿ ಅದಕ್ಕೆ ಚಿನ್ನದ ನೆನಪನ್ನು ತರುವುದರಲ್ಲಿ ವಿಶೇಷವಿಲ್ಲ; ಆದರೆ ಅದರೊಳಗಿರುವ ಬೀಜವನ್ನು ಲಿಂಗವನ್ನಾಗಿ ಉತ್ಪ್ರೇಕ್ಷಿಸುವುದು ಮಾತ್ರ ಮೇಲಿನ ಹಂತದಲ್ಲಿರುವ ಮನಸ್ಸಿನ ಗುರುತು. ಈ ಬೆಳೆದ ಮನಸ್ಸು ಒಂದೊಂದೆಡೆ ಒಂದೊಂದು ರೀತಿಯಾಗಿ ತನ್ನ ಪ್ರಭಾವವನ್ನು ತೋರಿಸುವುದು. ಭೋಗಿಯಲ್ಲಿದ್ದು ಆತನು ತನ್ನ ಕಾಂತೆಯೊಡನೆ ಏಕಾಂತದಲ್ಲಿರುವಾಗ,

"ಹೊತ್ತು ಹೋಗದು ರಮಣಿ ಬರಿಯ ಮಾತುಗಳಿಂದ ।
ಮತ್ತೆ ಇದರರ್ಥವನು ತಿಳಿದ್ಹೇಳಿ ರಮಣೀ ॥"

ಎನ್ನಿಸುವುದು: ಇನ್ನೊಬ್ಬ ರಮಣಿಯಲ್ಲಿದ್ದು ಆಕೆಯು ಕುಟ್ಟುವಾಗ,

ಸುವ್ವಿ ಸುವ್ವಕ್ಕ ನಾರೀ । ಸುಜ್ಞಾನದಾ ಪರಿ ॥ ಪ ॥

ಪೂಜೆಗೊಂಡೆಲೇ ವೈಯ್ಯಾರಿ । ಸುವ್ವಕ್ಕ ನಾರೀ ॥ ಅ ॥

ಒಂಭತ್ತು ಬಾಗಿಲಾ ಮುಂದೆ । ಒಂದೇ ಜೋತಿಯಾ ಬೆಳಕು ॥
ನಂಬಿಕಿಲ್ಲದಾ ಒಗೆತನ ಮಾಡಿದೆನೇ ॥ ೧ ॥

ಒಮ್ಮಾನದಾ ಜೋಳವಾ ತಂದು । ಮುಮ್ಮಾನದಾ ಗೋಧಿಯ ಬೀಸಿ ॥
ಒಮ್ಮಾನದಾ(?) ರೊಟ್ಟಿಯಾ ಸುಟ್ಟೇನೆ ॥ ೨ ॥

ಅಂಗ ಆಚಾರ ಬದನೇಕಾಯಿ । ಲಿಂಗ ಷಡ್ಕದಾ(? ಹೋಳನ್ನೇ ಮಾಡಿ ॥
ಸಂಗಸಮರಸ ಪೋಣೇಸಿ ಕೊಟ್ಟೆನೇ ॥ ೩ ॥

ಅಪ್ಪರೊಳಗೆ ಗಂಡ ಬಂದು । ಅಡುವ ಮಡಕೆಯನ್ನು ಒಡೆದು ॥
ಹುಟ್ಟು ಮುರಿದು ಮೂಲೆಗೇ ಚಾಚಿದನೆ ॥ ೪ ॥

ಎಂದು ಅಸ್ಪಷ್ಟಲಿಂಗಕವಾಗಿ ಹಾಡಿಸುವುದು: ಮತ್ತೊಮ್ಮೆ ಮಹಾನುಭಾವನಾದ ಯೋಗೀಶ್ವರನಲ್ಲಿ ಬಾಲಭಾವವನ್ನು ತಂದೊಡ್ಡಿ,

ಬಾರಕ್ಕ ನಾವಿಬ್ಬರಾಡುವ । ಯೋಗಸಾಧನವೆಂಬುದ ನೋಡುವ ॥
ಎಂಟು ದಾಳಗಳನ್ನೇ ಕಟ್ಟುವ । ಅ । ತುಂಟರೈತರ ಹೊರಗಟ್ಟುವಾ ॥
ಹದಿ । ನೆಂಟು ದಾಳಗಳುಳ್ಳ । ಅ । ಮಂಟಪ ಮಧ್ಯದಿ
ಕಂಟಕವಿಲ್ಲದೆ ಕವಡೆಯನಾಡುವ ॥ ೧ ॥

ನವದ್ವಾರಗಳನ್ನೇ ಬಂಧಿಸಿ । ಷಡುಚಕ್ರದಿಂದಲಿ ವಾಯುವನೇರಿಸಿ ॥
ಕೇಳಕ್ಕ ಮನವ ಭ್ರೂಮಧ್ಯದಿ ನಿಲ್ಲಿಸಿ । ಒಡೆಯ ಚಿದಾನಂದ ಗುರುವನ್ನೇ
ಸ್ಮರಿಸಿ ॥

ಎಂದು ಸ್ಪಷ್ಟಾಸ್ಪಷ್ಟಲಿಂಗಕವಾಗಿ ನುಡಿಸುವುದು.*

ಜನ ಜನಾಂಗಗಳಲ್ಲಿಯೂ ಈ ಒಗಟೆಗಳಿದ್ದುವು: ಇವೆ.† ಸಂಹಿತೆಯಲ್ಲಿಯೂ ಒಗಟೆಗಳು ಅಲ್ಲಲ್ಲಿ ಬಂದಿವೆ. ಅಷ್ಟೇ ಅಲ್ಲ; ಬ್ರಾಹ್ಮಣಗಳಲ್ಲಿ ಯಜ್ಞೀಯ ಪದಾರ್ಥಗಳಲ್ಲಿ ಅಲೌಕಿಕವಾಗಿ ಅತೀಂದ್ರಿಯ ಸಾಮರ್ಥ್ಯಗಳನ್ನು ಕಂಡು ಅವುಗಳ ವಿನಿಯೋಗವನ್ನು ಗೊತ್ತುಮಾಡುವ ಮನೋಭಾವವೊಂದಿದೆ. ಅದು ಇಂತಹ ಒಗಟೆಗಳನ್ನು ಮಾಡುವ ಮನೋಭಾವದ ಮೂಲವೆಂದು ನಮ್ಮ ಭಾವನೆ. ಇತರ ದೇಶಗಳ ಒಗಟೆಗಳಲ್ಲಿ "ಹಗ್ಗ ಹಾಸಿದೆ; ಕೋಣ ಮಲಗಿದೆ" ಎಂಬ ಒಗಟೆಯಲ್ಲಿರುವ ಆಟವೊಂದು ಕಂಡುಬಂದರೆ, ನಮ್ಮ ದೇಶದ ಒಗಟೆಗಳಲ್ಲಿ "ಚಿನ್ನದ ಪೆಟ್ಟಿಗೆಯಲ್ಲಿ ಬೆಳ್ಳಿಯ ಲಿಂಗ" ಎಂಬ ಒಗಟೆಯಲ್ಲಿರುವಂತೆ ಆಟದ ಜೊತೆಗೆ ಪಾಟವೂ ಬೆರೆದಿರುವುದು ಕಂಡುಬರುತ್ತದೆ. ಇದು ನಮ್ಮ ಸಂಸ್ಕೃತಿಯ ಗುರುತು.

"ಒಂದು ಮರದ ಮೇಲೆ ಎರಡು ಹಕ್ಕಿಗಳಿವೆ. ಒಂದು ರುಚಿಯಾದ ಹಣ್ಣುಗಳನ್ನು ತಿನ್ನುತ್ತದೆ; ಮತ್ತೊಂದು ಏನೂ ತಿನ್ನದೆ ಸುಮ್ಮನೆ ಕುಳಿತಿದೆ" ಎಂಬ ಶ್ರುತಿಯನ್ನು ತೆಗೆದುಕೊಳ್ಳೋಣ. ಇದು ದ್ವೈತಪರವೆಂದೂ ಅದ್ವೈತಪರವೆಂದೂ ವಾದವಿವಾದಗಳು ಹೊರಟಿವೆ. ಅವಿರಲಿ. ಇದು ಎಂತಹ ಸೊಗಸಾದ ಒಗಟು! ನಾವು ದಿನ ದಿನವೂ ನೋಡುವ ಚಿತ್ರವಿದು. ಆದರೆ ಇಲ್ಲಿ ಜೀವಾತ್ಮ ಪರಮಾತ್ಮರನ್ನು ಕಾಣುವುದು ಮಾತ್ರ ನಮಗೆ ವಿಾರಿದುದು. ಹಾಗಿಲ್ಲದೆ ನಾವೂ ಆ ಸಾಮ್ಯವನ್ನು ಕಾಣಬಲ್ಲೆವಾದರೆ, ನಮ್ಮ ಮನಸ್ಸೂ ಆ ವೈಭವವನ್ನು ಸ್ಮರಿಸಬಲ್ಲುದಾದರೆ, ನಮ್ಮ ಮನಸ್ಸೂ ಔಪನಿಷದಿಕ ಭಾವನಾ ಪರಿಪ್ಲುತ, ಅಥವಾ ಆ ಜಾತಿ ಯೆನ್ನಬಾರದೇಕೆ?

ಇನ್ನೊಂದು ಮಂತ್ರವನ್ನು ತೆಗೆದುಕೊಳ್ಳೋಣ:—"ವೃಷಭವೊಂದುಂಟು. ಅದಕ್ಕೆ ನಾಲ್ಕು ಕೊಂಬುಗಳು, ಮೂರು ಕಾಲುಗಳು, ಎರಡು ತಲೆಗಳು, ಏಳು

* ಒಗಟೆಗಳನ್ನು ಕಟ್ಟುವವರಿಲ್ಲ ಈ ಭಾವ ಪ್ರಾದುರ್ಭಾವ ಪ್ರಭಾವಗಳನ್ನು ಗಮನಿಸಿ ತಿಳಿದು ಒಗಟೆಯನ್ನು ಕಟ್ಟುವರೇ ಎಂಬ ಪ್ರಶ್ನೆಯು ಇಲ್ಲಿ ಹುಟ್ಟುವುದು ಸಹಜ. ಭಾವಗಳ ಉದಯ, ಶಬಲತಾ, ಶಾಂತಿ, ವಿನಿಯೋಗಗಳನ್ನೂ, ವೃತ್ತಿಗಳ ಯಾತಾಯಾತವನ್ನು ಅರಿಯುವುದೂ ಒಂದು ವಿದ್ಯೆ. ಅವನ್ನು ಬಲ್ಲವರು ಇದನ್ನೂ ಬಲ್ಲರು. ಕಾಮಸಂಕಲ್ಪವರ್ಜಿತವಾದ ಶುದ್ಧ ಮನವು ಇದನ್ನರಿಯುವಂತೆ ತದಿತರವಾದ ಅಶುದ್ಧ ಮನವು ಇದನ್ನು ಅರಿಯಲಾರದು. "ಮನೋರಥ ಶತೈರ್ವೃತ"ವಾದ ಮನವು ಕೇಂದ್ರವನ್ನು ಬಿಟ್ಟು ಎಲ್ಲೆಲ್ಲಿಯೋ ಅಲೆಯುತ್ತ ಬಹಿರ್ಮುಖವಾಗಿರುವುದು. ಬೀದಿಗಳನ್ನು ತಿರುಗಿದಾಗ ಊರು ಅಸ್ಪಷ್ಟವಾಗಿ ತೋರುವಂತೆ ಬಹಿರ್ಮುಖವಾಗಿರುವ ಮನವು ಈ ವೃತ್ತಿ ಪ್ರಪಂಚವನ್ನು ಅಸ್ಪಷ್ಟವಾಗಿ ಅಲ್ಲದೆ ಅಖಂಡವಾಗಿ ಕಾಣಲಾರದು : ಆದರೆ ಕೇಂದ್ರವನ್ನು ಹಿಡಿದಾಗ ಶಿಖರವೇರಿದವನು ಊರನ್ನೆಲ್ಲಾ ಕಾಣುವಂತೆ, ವೃತ್ತಿಗೆ ಅತೀತವಾದಾಗ ಮಾತ್ರ ಅದನ್ನು ಅರಿಯುವುದು. ಅಹೋರಾತ್ರಿಗಳಲ್ಲಿ ನಡೆಯುತ್ತಿದ್ದರೂ ನಮಗೆ ಅಜ್ಞಾತವಾಗಿರುವ ಶ್ವಾಸವು ಜ್ಞಾತವಾಗಿ ನಡೆದಾಗ ಅಜಪಾಗಾಯತ್ರಿಯಾಗುವಂತೆ ಮನೋವೃತ್ತಿಯರಿತು ನಡೆದವನೂ ಯೋಗಿಯಾಗುವನು. ಆ ಸ್ವಾಧೀನತೆಯು ಲಭಿಸುವವರೆಗೂ ನಾವು ಪರಾಧೀನರು. ಅದುವರೆಗೂ ಕಾರ್ಯವು ನಮ್ಮ ಅರಿವಿಗೆ ದೊರೆವುದಲ್ಲದೆ ಕಾರಣಗಳು ದೊರೆಯವು. ಅದರಿಂದ, ನಾವು ಒಗಟೆ ಕಟ್ಟಿದರೂ ಅದರ ಹುಟ್ಟಿಗೆ ಕಾರಣವಾದ ವೃತ್ತಿಗಳ ಆಟವನ್ನು ಕಾಣೆವು.

† *cf. Encyclopædia of Religion & Ethics*, article : "Riddles."

ಕೈಗಳು. ಅದನ್ನು ಮೂರು ಹಗ್ಗಗಳಲ್ಲಿ ಕಟ್ಟಿದೆ" ಎಂಬ ಅರ್ಥದ ಈ ಮಂತ್ರವು ವ್ಯಾಕರಣ ಪರವೆಂದೂ ಯಜ್ಞಪರವೆಂದೂ ಶಾಸ್ತ್ರಗಳಲ್ಲಿ ಉಲ್ಲೇಖವಿದೆ. (ಯೋಗ ಪರವಾಗಿಯೂ ವೇದಾಂತ ಪರವಾಗಿಯೂ ಅರ್ಥಮಾಡಬಹುದಂತೆ.) ಹೀಗೆಯೇ ಸೂತ್ರಗಳೂ ಒಗಟಾಗಿ ಕುಳಿತು, ಎತ್ತ ಎಳೆದರೆ ಅತ್ತ ಬರುತ್ತ, ಸರ್ವತೋಮುಖ ವಾಗಿದ್ದರೂ ಸತ್ಯಾರ್ಥವನ್ನು ಬೋಧಿಸುತ್ತ ಕುಳಿತಿರುವವಲ್ಲವೆ? ಇಂತಹ ಒಗಟು ಮಂತ್ರಗಳನ್ನೂ ಸೂತ್ರಗಳನ್ನೂ ರಚಿಸಿದವರ ಸಂಸ್ಕೃತಿಯೂ ಕರ್ನಾಟಕ ಸಂಸ್ಕೃತಿಯೂ ಏಕಜಾತೀಯವೆಂದು ನಮ್ಮ ಮತ.

ಒಗಟೆಗಳಲ್ಲಿ ನಾನಾವಿಧಗಳಿವೆ. ಸರ್ವಜ್ಞನ ಒಗಟೆಗಳಂತೆ ಪದ್ಯಗಳಾಗಿ ದ್ವಿಪದಿ, ತ್ರಿಪದಿ, ಚೌಪದಿಗಳಲ್ಲಿರುವ ಒಗಟೆಗಳೂ ಉಂಟು:—

ದ್ವಿಪದಿ॥ ಮೊಗ್ಗರಳಿ ಹೂವಾಗಿ ಪುಷ್ಪತಾನಲ್ಲ ॥
ಹಿಗ್ಗಲಿಸಿ ನೋಡಿದರೆ ಪರಿಮಳವೆ ಇಲ್ಲ ॥ (ಕೊಡೆ)

ಹನ್ನೆರಡು ಕೊಟ್ಟಡಿ ಮೂವತ್ತು ತೊಟ್ಟಿಲು ॥
ಮಲಗುವರು ಮಾತ್ರ ಇಬ್ಬರೇ ಮಕ್ಕಳು ॥ (ವರ್ಷ, ತಿಂಗಳು, ದಿನ)

ತ್ರಿಪದಿ॥ ಕಡಿದರೆ ಹಾಲು,
ಹೊಡೆದರೆ ಹಾಲು,
ಬಡಿದರೆ ಸಾವಿರ ಮಕ್ಕಳು ॥ (ಹಲಸಿನ ಹಣ್ಣು)

ಬಿಳೀಗದ್ದೆ ಕರೀಬತ್ತ,
ಕಯ್ಯಾಗೆ ಹಾಕಬೇಕು,
ಬಾಯ್ಯಾಗೆ ತೆಗೆಯಬೇಕು ॥ (ಪುಸ್ತಕ ಬರೆಯುವುದು ಓದುವುದು)

ಬಡಗಿ ಮಾಡದ ಮನೆ,
ಬಾಚಿ ಕೆತ್ತದ ಮನೆ,
ಅಂಬರದ ನನ್ನರಮನೆ ॥ ( )

(ಇಲ್ಲಿರುವ ಛಂದೋವೈವಿಧ್ಯಗಳನ್ನು ನೋಡಿರಿ.)

ಚೌಪದಿ॥ ಕಯ್ಯುಂಟು ಕಾಲಿಲ್ಲ ಸಿರವರಿದ ಮುಂಡ,
ಮೆಯ್ಯಲ್ಲಿ ನವಗಾಯ ಒಂಭತ್ತು ತುಂಡ,
ಓಡಿಬಂದೊಯ್ಯನೇ ಹೆಗಲೇರಿಕೊಂಡ,
ಕಯ್ಯಬಿಟ್ಟೆಸೆದರೆ ತಾ ಮುದುರಿಕೊಂಡ ॥ (ಅಂಗಿ)

ಸುತ್ತುಸುತ್ತುವುದು ವಾಲೆ ತಾನಲ್ಲ,
ಚಿತ್ರ ಬರೆಯುವುದು ಕಂಟ ತಾನಲ್ಲ;
ಪೆಟ್ಟಿಗೆಯಲಿಡಲು ಆಭರಣವಲ್ಲ,
ತಿಳಿದು ಹೇಳುವ(ವಾ) ಜಾಣಗರಿದಲ್ಲ ॥ (ಹಾವು)

ಗಾದೆಗಳಂತೆ ಇರುವ ಒಗಟೆಗಳೂ ಉಂಟು :—

ಹಸುರು ಕೋಲಿಗೆ ಮುತ್ತಿನ ತುರಾಯಿ (ಈರುಳ್ಳಿ ಹೂವ್ವು).
ಹಸುರು ಗಿಡದ ಮೇಲೆ ಮೊಸರು ಚೆಲ್ಲಿದೆ (ಮಲ್ಲಿಗೆಯ ಮೆಳೆ).

ಗಾದೆಗಳಂತೆಯೇ ಒಗಟುಗಳು ಹೊಸ ಹೊಸದಾಗಿ ಹುಟ್ಟುವುದೂ ಉಂಟು:—

ಬಾಯಿಲ್ಲದ ಬಳ್ಳಿ ಬಾರಿ ಬಾರಿಗೂ ಮಾತಾಡುತ್ತದೆ (ಟೆಲಿಫೋನ್).

ಗಾಡಿ ಗಾಡಿ ಸೌದೆ ತಿಂದು,
ಭಂಡಿ ಭಂಡಿ ನೀರು ಕುಡಿದು,
ಹೊಗೆಯ ಕಾರಿ ಕೂಗಿಕೊಂಡು,
ಓಟ ಓಡುವ ಕುದುರೆ ಯಾವುದು ॥ (ರೈಲು ಗಾಡಿ)

ಪರದೇಶಗಳ ಒಗಟೆಗಳು ಕೆಲವನ್ನು ಹೇಳಿ ಈ ಭಾಗವನ್ನು ಮುಗಿಸೋಣ :—

ನೆಲೆಗೇ ನಿಲ್ಲದೆ ಹಾರಾಡುವುದು ಯಾವುದು? (ಗಾಳಿ)
ಹೊಡೆದಾಡಿಯೂ ಗಾಸಿಯಾಗದ ವೀರರು ಯಾರು? (ಹಲ್ಲು)
ಸೆನೆಗಲ್ಲಿನ ವೋಲುಫ಼ರವು.

ತಿಂದುಹಾಕುವ ವಿಾಸುಗಳ ನಡುವೆ ನಿಂತಿರುವ ವೀರನಾರು? (ನಾಲಗೆ)
ತಲೆಗೊಂದು ಟೋಪಿ ಹಾಕಿಕೊಂಡಿರುವ ಇಪ್ಪತ್ತು ಜನ ಅಣ್ಣತಮ್ಮಂದಿರು (ಬೆರಳು).
ಸವೋಅನ್‌ರು.

ಕುದುರೆಗೆ ಮಿಂಚಿ ಓಡಿ ನೀರು ದಾಟಿದರೂ ನೆನೆಯದೆ ಇರುವವರಾರು? (ಸೂರ್ಯ)
ಒಬ್ಬ ತಂದೆಗೆ ಹನ್ನೆರಡು ಮಕ್ಕಳು (ಸಂವತ್ಸರ).

ಫ್ರಾನ್ಸಿಸವು.

—

## ಉಪಸಂಹಾರ

ಕನ್ನಡ ನುಡಿಯ ಪ್ರಪಂಚವನ್ನು, ಯಥಾವಕಾಶವಾಗಿ, ಸ್ಥಾಲೀಪುಲಾಕ ನ್ಯಾಯಾನುಗುಣವಾಗಿ, ಪರೀಕ್ಷೆ ಮಾಡಿದುದಾಯಿತು. ವಿಶ್ವತೋಮುಖವಾಗಿ ಪೂರ್ಣವಾದ ಇಂತಹ ಪರೀಕ್ಷೆಯು ನಡೆಯಲಿ ಎಂದು ಹಾರೈಸಿ ಈ ಲೇಖನಮಾಲೆಯನ್ನು ಇಲ್ಲಿಗೆ ಮುಗಿಯಿಸುವೆವು.

ಇದರಂತೆಯೇ ನಡೆಯ ಪ್ರಪಂಚವನ್ನೂ ಭಾಗ ಭಾಗವಾಗಿ ವಿಂಗಡಿಸಿ ಹುಡುಕಿ ನೋಡಬೇಕಾದುದೂ ಉಂಟು. ಈಗ ನಡೆದಿರುವ ಪರೀಕ್ಷೆಯಿಂದ ದೊರೆತಿರುವ ಅಂಶಗಳನ್ನು ನಡೆಯಬೇಕಾದ ಪರೀಕ್ಷೆಯ ಫಲವೂ ಸಮರ್ಥಿಸುವುದು ಎಂಬ ನಂಬಿಕೆಯು ನಮಗುಂಟು. ಆ ನಂಬಿಕೆಯು ಪಾಠಕರಿಗೂ ಹುಟ್ಟುವಂತೆ, ಆರ್ಯರ ಕಾಲಕ್ಕೆ ಮುಂಚೆ ದ್ರಾವಿಡರ ಸಮಾಜವು ಹೇಗಿದ್ದಿತು? ವೇದಗಳ ಕಾಲದಲ್ಲಿ ಆರ್ಯರು ಹೇಗಿದ್ದರು? ದ್ರಾವಿಡರು ಆರ್ಯ ಸಂಸ್ಕೃತಿಯನ್ನು ಸ್ವೀಕರಿಸಿದುದು ಯಾವಾಗ? ಹೇಗೆ? ಎಂಬುದನ್ನೂ ಕುರಿತು ಎರಡು ಮಾತು ಹೇಳೋಣ.

### ದ್ರಾವಿಡರು (ಪುರಾಣ ಯುಗದಲ್ಲಿ)

"ದ್ರಾವಿಡರು ಬೇಟೆಯಾಡುತ್ತ ಕಾಡಿನಿಂದ ಕಾಡಿಗೆ ಅಲೆಯುತ್ತಿದ್ದರು. ಅವರು 'ತಾಯಿಯ ಮಕ್ಕಳು' ಎಂದು ಹೇಳಿಕೊಳ್ಳುವವರು. ತಾಯಿಯರೂ ಅವರ ಮಕ್ಕಳೂ ಒಂದೆಡೆ ನಿಲ್ಲುವರು. ಗಂಡುಸರು ಆಹಾರವನ್ನು ಸಂಪಾದಿಸುವು ದಕ್ಕೋಸ್ಕರ ಹೊರಟುಹೋಗುವರು. ಬೇರೆಬೇರೆ ಗುಂಪಿನ (ಕುಲದವರು) ತರುಣತರುಣಿಯರು ಹಬ್ಬಗಳಲ್ಲಿ ಕೂಡಿ ಕುಣಿಯುವರು. ಆ ಸಂದರ್ಭವು ಕುಲಾಭಿವೃದ್ಧಿಗೆ ಕಾರಣವಾಗುತ್ತಿದ್ದಿತು. ಹೆಂಗುಸರು ಆಗಾಗ ಕಂದಮೂಲಾದಿಗಳನ್ನು ಸಂಗ್ರಹಿಸಿ ತರುವರು. ಈ ಹೆಂಗುಸರೇ ಆರ್ಯರ್ಷಿಗಳಿಂದ ವ್ಯವಸಾಯ ಕ್ರಮವನ್ನು ಕಲಿತು ಆರಂಭಿಸಿದರು. ಆಗಲೂ ಆಸ್ತಿಪಾಸ್ತಿಗಳು, ಮಕ್ಕಳು ಮರಿಗಳು ಎಲ್ಲವೂ ಕುಲದ ಸ್ವತ್ತೇ ಹೊರತು ಯಾರೊಬ್ಬರಿಗೂ ಸೇರಿದುದಲ್ಲ."

"ಗಂಡುಸರು ತಮ್ಮ ಮಕ್ಕಳ ವಿಚಾರವಾಗಿ ಅಷ್ಟಾಗಿ ಯೋಚಿಸುತ್ತಿರಲಿಲ್ಲ. ಗಂಡುಸರು ಹೆಂಗುಸರೆಲ್ಲ ಕಲೆತು ಒಂದೇ ಕುಟುಂಬದವರಂತೆ ಇರುವರು. ಅವರು ಮಾತೃದೇವರು. ಅವರಿಗೆ ತಂದೆಯ ಋಣವಷ್ಟಾಗಿ ಇಲ್ಲ."

"ಬೇಟೆಯಾಡುವ ವಯಸ್ಸು ಕಳೆದವರು ಬಂದು ಮನೆ ಬಾಗಿಲು ಕಾದು ನಿಲ್ಲುವರು. ಅಂತಹವರಿಂದ ಮಕ್ಕಳುಮರಿಗಳು ವಿದ್ಯಾಬುದ್ಧಿಗಳನ್ನು ಕಲಿಯುವರು.

ಕಾಡುಮೃಗಗಳನ್ನು ಕುರಿತು, ಗಿಡಮೂಲಿಕೆಗಳನ್ನು ಕುರಿತು, ಬಿಲ್ಲುಬಾಣಗಳನ್ನು ಕುರಿತು, ಕುಲದ ಸಂಪ್ರದಾಯ ಪದ್ಧತಿಗಳನ್ನು ಕುರಿತು ಆ ಹಿರಿಯರು ಈ ಹುಡುಗರಿಗೆ ಹೇಳುವುದೇ ಪಾಠಗಳು. ಈ ಹಿರಿಯರು ಕುಳಿತು ಈ ಕಥೆಗಳನ್ನು ಹೇಳಿ ಕಲಿಯಬೇಕಾದುದನ್ನು ಕಲಿಸುವ ತೋಪೇ ವಿದ್ಯಾಶಾಲೆ. ಚಾವಡಿ, ಕುಲದವರ ದೇವಗೃಹ, ಸಮಸ್ತವೂ, ಎಲ್ಲವೂ ಅಲ್ಲಿಯೇ!"*

## ವೇದಯುಗದ ಆರ್ಯರು

ಆರ್ಯರ ಸಮಾಜದಲ್ಲಿ ಕುಟುಂಬಕ್ಕೆ ಪ್ರಧಾನಸ್ಥಾನ. ಕುಟುಂಬದಲ್ಲಿ ಸ್ತ್ರೀಯು ಗೃಹಿಣಿಯಾಗಿ ಸರ್ವಾಧಿಕಾರ ಮಾಡುತ್ತಿದ್ದರೂ ಪತಿಯಪ್ಪಣೆಯನ್ನು ಪರಿಪಾಲಿಸುವಳು. ಬಹುಪತ್ನೀತ್ವವು ನಿಷಿದ್ಧವಲ್ಲವಾದರೂ ಅಪರೂಪ. ಬಹುಪತಿತ್ವವಂತೂ ಇಲ್ಲವೇ ಇಲ್ಲ. ಸ್ತ್ರೀಯರು ನೀತಿ ಧರ್ಮಪರಾಯಣೆಯರು; ಮದುವೆಗೆ ಮೊದಲು ತಂದೆಯ ಅಧೀನದಲ್ಲಿಯೂ ಮದುವೆಯಾದ ಮೇಲೆ ಗಂಡನ ಅಧೀನದಲ್ಲಿಯೂ ಇರುವರು. ಆದರೂ ಅವರು ತಾವೊಪ್ಪಿದವನನ್ನು ಮದುವೆಯಾಗುವರು. ವಿಲೋಮ ವಿವಾಹವು ರೂಢಿಯಲ್ಲಿರಲಿಲ್ಲ. ಕನ್ಯಾಶುಲ್ಕ ವರದಕ್ಷಿಣೆಗಳೆರಡೂ ಆಚರಣೆಯಲ್ಲಿದ್ದುವು. ಅಪ್ಪಿತಪ್ಪಿ ಹೆಂಗುಸು ದುರ್ಮಾರ್ಗದಲ್ಲಿ ಬಿದ್ದರೂ ಅವಳನ್ನು ಸಮಾಜವು ಅಷ್ಟಾಗಿ ಶಿಕ್ಷಿಸುತ್ತಿರಲಿಲ್ಲ. ನಿಯೋಗ ಪದ್ಧತಿಯು ಅಲ್ಲಲ್ಲಿ ರೂಢಿಯಲ್ಲಿದ್ದಿತು. ವಿಧವಾ ವಿವಾಹವು ಅಂಗೀಕೃತವಾಗಿರಲಿಲ್ಲ.

ಪಿತಾ ಪುತ್ರ ಸಂಬಂಧವು ಮಧುರವಾಗಿದ್ದಿತು. ಕುಟುಂಬದ ಆಸ್ತಿಯೆಲ್ಲವೂ ತಂದೆಯದು. ಮಗನಿಗೆ ಮದುವೆಯಾಗಿ ಮಕ್ಕಳಾದರೂ ಬೇರೆ ಹೋಗಿ ಸಂಸಾರ ಹೂಡಬೇಕೆಂಬ ನಿಯಮವಿರಲಿಲ್ಲ. ಅಪುತ್ರರು ದತ್ತುಮಾಡಿಕೊಳ್ಳುತ್ತಿದ್ದರು. ಚರ ಆಸ್ತಿಯು ಕುಟುಂಬದಲ್ಲಿ ಬೇರೆ ಬೇರೆಯವರಿಗೆ ಸೇರಿದ್ದರೂ ಸ್ಥಿರ ಆಸ್ತಿಯು ಮಾತ್ರ ಯಜಮಾನನದು. ತಂದೆಯಿರುವವರೆಗೂ ಮಕ್ಕಳು ಆಸ್ತಿಯನ್ನು ಹಂಚಿಕೊಳ್ಳುತ್ತಿರಲಿಲ್ಲ. ತಂದೆಯು ವೃದ್ಧನಾಗಿ ಸಂಸಾರ ನಿರ್ವಹಣಮಾಡಲು ಅಶಕ್ತನಾದರೆ ಸಂಸಾರವನ್ನು ಹಿರಿಯ ಮಗನಿಗೆ ವಹಿಸಿಕೊಟ್ಟು ತಾನು ಹೊರಟುಹೋಗುವನು.

ಜನರಲ್ಲಿ ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರೆಂಬ ನಾಲ್ಕು ಜಾತಿಗಳು ಮುಖ್ಯವಾಗಿದ್ದುವು. ಜಾತಿಯು ಜನ್ಮದಿಂದಲೇ ಗೊತ್ತಾಗುತ್ತಿದ್ದಿತು.† ವರ್ಣಧರ್ಮ

---

* E. B. Havel's *Aryan Rule in India*, Pages 12-3; *cf.* '*Tamils* 1800 *Years Ago*, Chap. IV & IX.

† "The existence of the caste system in any form in the age of the Rigveda has been denied by high authority, though it has been asserted of late with increasing insistence." *Cambridge History of India I*, Page 92.

Again, "there is good reason to believe that in the period of the Rigveda, the priesthood and the nobility were heriditary....It may even be that these distinctions are earlier than the severance of the Indo-Iranians if not as old as the union of the Aryan People." *Ibid.*, Page 125.

ಗಳಂತೆ ಆಶ್ರಮ ಧರ್ಮಗಳೂ ಸಂಸ್ಕಾರಗಳೂ ಆಚರಣೆಯಲ್ಲಿದ್ದರೂ ಅವುಗಳನ್ನು ತಿರಸ್ಕರಿಸಿದವರೂ ಇದ್ದರು. ಅಂತಹ ವ್ರಾತ್ಯರನ್ನು ಪುನಸ್ಸಂಸ್ಕಾರಮಾಡಿ ಅಂಗೀಕರಿಸುವ ವಾಡಿಕೆಯು ಇದ್ದಿತು. "ನೂರಾರು ವರ್ಷ ಬಾಳಬೇಕು; ಹತ್ತಾರು ಜನ ವೀರಪುತ್ರರನ್ನು ಪಡೆಯಬೇಕು; ಹಲವಾರು ಯಜ್ಞಗಳನ್ನು ಮಾಡಬೇಕು" ಎಂಬುದು ದ್ವಿಜರ ಜೀವನದ ಮುಖ್ಯೋದ್ದೇಶವಾಗಿದ್ದಿತು. ಬ್ರಾಹ್ಮಣ ಕ್ಷತ್ರಿಯರಲ್ಲಿ ಅನೇಕರು ಬ್ರಹ್ಮವಾದಿಗಳು. ಸ್ತ್ರೀಯರೂ ಬ್ರಹ್ಮವಾದಿನಿಗಳಾಗಲು ಅಧಿಕಾರವಿದ್ದಿತು. ಪ್ರೇಯಸ್ಸಿಗಿಂತ ಶ್ರೇಯಸ್ಸು ಹೆಚ್ಚು, ಅರ್ಥಕಾಮಗಳಿಗಿಂತ ಧರ್ಮವು ಮಿಗಿಲು, ಎಂಬ ಭಾವನೆಯು ಸರ್ವತ್ರ ನೆಲಸಿದ್ದಿತು.

ಬ್ರಾಹ್ಮಣರು ನಗರವಾಸಿಗಳಾಗಿರದೆ ನೀರು ಹುಲ್ಲು ಕಟ್ಟಿಗೆಗಳು ಸಮೃದ್ಧವಾಗಿರುವ ಗ್ರಾಮಗಳಲ್ಲಿ, ಅಗ್ನಿಸೇವೆಮಾಡುತ್ತ, ಷಟ್ಕರ್ಮನಿರತರಾಗಿದ್ದರು. ರಾಜಾಶ್ರಯವನ್ನು ಪಡೆದ "ಲೌಕಿಕ"ರು ವೈದಿಕರಿಗಿಂತ ಕೀಳು ಎಂಬ ಭಾವನೆ ಇದ್ದಿತು. ಧರ್ಮವಿಚಾರಗಳಲ್ಲಿ, ಆಚಾರ ಸಂಪ್ರದಾಯಗಳಲ್ಲಿ, ಸಂದೇಹ ಬಂದಾಗ ಸತ್ಯಕಾಮರೂ ಅಡಾಂಭಿಕರೂ ಆದ ವಿದ್ವಾಂಸರು ಪರಿಷತ್ತಾಗಿ ಸೇರಿ ವಿಮರ್ಶೆಮಾಡಿ ಸಿದ್ಧಾಂತಮಾಡುವರು.

ಕ್ಷತ್ರಿಯರು ನಗರ ಪಟ್ಟಣಗಳಲ್ಲಿ 'ಜನಪದ' ಯೋಗಕ್ಷೇಮವನ್ನು ನೋಡಿಕೊಳ್ಳುತ್ತ ಇರುವರು. ಸಾಮಾನ್ಯವಾಗಿ ಅರಸರೆಲ್ಲರೂ ಈ ಜಾತಿಯವರು. ಅಲ್ಲಲ್ಲಿ ಅರಸನನ್ನು ಚುನಾವಣೆಮಾಡುವ ಪದ್ಧತಿಯಿದ್ದಿತು. ಅದರಂತೆಯೇ ತಲೆತಲಾಂತರದಿಂದ ಅರಸರಾಗಿ ಬಂದವರೂ ಇದ್ದರು. ಅರಸನು ದೇಶದಲ್ಲಿ ಕುಲಾಚಾರಗಳನ್ನೂ ನ್ಯಾಯವನ್ನೂ ಪಾಲಿಸುವನು. ಹೊರಗಿನಿಂದ ಬಂದ ಶತ್ರುಗಳ ಬಾಧೆಯನ್ನು ನಿವಾರಿಸುವನು. ತನ್ನ ದೇಶದಲ್ಲಿ ಕಂದಾಯವಾಗಿ ಬಂದುದು, ಹೊರಗಿನ ಶತ್ರುಗಳನ್ನು ಗೆದ್ದು ತಾನು ತಂದುದು ಈ ಎರಡೂ ಅರಸನ ಸಂಪತ್ತು.

ವೈಶ್ಯರು ಕೃಷಿ, ವಾಣಿಜ್ಯ, ಗೋರಕ್ಷಣಾದಿಗಳನ್ನು ಮಾಡುತ್ತಿದ್ದರು. ದೇಶಾಂತರ ವ್ಯಾಪಾರವು ರೂಢಿಯಲ್ಲಿದ್ದಿತು. ಶೂದ್ರರು ಮರ, ಲೋಹ, ಮುಂತಾದವುಗಳ ಕೆಲಸವನ್ನೂ ನೇಗೆ ಮುಂತಾದವುಗಳನ್ನೂ ಮಾಡುತ್ತಿದ್ದರು.

ಆರ್ಯರು ಉಪಜೀವನಕ್ಕಾಗಿ ವ್ಯವಸಾಯವನ್ನು ಹೆಚ್ಚಾಗಿ ಅವಲಂಬಿಸಿದವರು. ಗದ್ದೆ ಹೊಲಗಳನ್ನು ನೇಗಿಲುಗಳಿಂದ ಉತ್ತು ಕಾಳನ್ನು ಬಿತ್ತಿ ಬೆಳೆಯಿಂದ ಜೀವಿಸುತ್ತಿದ್ದರು. ಉಳುವುದಕ್ಕೆ ಎತ್ತುಗಳನ್ನು ಕಟ್ಟುತ್ತಿದ್ದರು. ಕುಡುಗೋಲಿನಿಂದ ಬೆಳೆಯನ್ನು ಕೊಯ್ದು ಹೊರೆಗಳಾಗಿ ಅಡಕಿಟ್ಟು ಕಣಮಾಡಿ ಕಾಳು ತೂರುವರು. ನೀರು ಎತ್ತುವುದೂ ನೀರು ಹಾಯಿಸಿ ಬೆಳೆಮಾಡುವುದೂ ಅವರಿಗೆ ತಿಳಿದಿದ್ದಿತು.

ಮನೆಯಲ್ಲಿ ಮಂದಲಿಗೆ, ಮಣೆ, ಕಾಲುಮಣೆ, ಮಂಚಗಳು ಇದ್ದುವು. ಹಿತ್ತಾಳೆ, ತಾಮ್ರ, ಕಂಚು, ಕಬ್ಬಿಣ, ಮರ, ಕಲ್ಲು ಇವುಗಳ ಪಾತ್ರೆಗಳು ಬಳಕೆಯಲ್ಲಿದ್ದುವು. ಹೆಂಗುಸರೂ ಗಂಡುಸರೂ ಎರಡು ಮೂರು ಬಟ್ಟೆಗಳನ್ನು ಉಟ್ಟು ಹೊದೆಯುತ್ತಿದ್ದರು. ಚಿನ್ನದ ಆಭರಣಗಳನ್ನು ಧರಿಸುತ್ತಿದ್ದರು. ಹೆಂಗುಸರು ಜಡೆಯನ್ನು ಹೆಣೆದುಕೊಳ್ಳುವರು; ತುರುಬು ಕಟ್ಟುವರು. ಗಂಡುಸರಲ್ಲಿ ಜಟಾಧಾರಿಗಳೂ ಏಕಶಿಖಿ ದ್ವಿಶಿಖಿ ತ್ರಿಶಿಖಿ ಪಂಚಶಿಖಿಗಳೂ ಇದ್ದರು. ಗಡ್ಡ ಬೆಳೆಸುವುದೂ ವಾಡಿಕೆಯಲ್ಲಿದ್ದಿತು.

ಜನರು ಕುದುರೆ ಕಟ್ಟಿದ ರಥ, ಎತ್ತು ಕಟ್ಟಿದ ಬಂಡಿಗಳಲ್ಲಿ ತಿರುಗುವರು. ತೊಟ್ಟಿಯ ಮನೆಗಳಲ್ಲಿ ವಾಸಿಸುವರು. ದನ, ಎಮ್ಮೆ, ಕುದುರೆ, ಕತ್ತೆ, ಕುರಿ, ಮೇಕೆ, ನಾಯಿಗಳನ್ನು ಸಾಕುತ್ತಿದ್ದರು. ಬಲೆ ಬೀಸಿ ಸಿಂಹಗಳನ್ನು ಹಿಡಿದು, ಹಳ್ಳವನ್ನು ತೋಡಿ ಸಾರಗಗಳನ್ನು ಕೆಡವಿ, ಹಂದಿಯ ಮೇಲೆ ನಾಯಿಗಳನ್ನು ಬಿಟ್ಟು ಬೇಟೆಯಾಡುವರು. ಕಾಡೆಮ್ಮೆಗಳನ್ನು ಅಟ್ಟಿಕೊಂಡು ಹೋಗಿ ಬಾಣಗಳಿಂದ ಹೊಡೆಯುವರು; ಪಳಗಿದ ಆನೆಗಳನ್ನು ಬಿಟ್ಟು ಕಾಡಾನೆಗಳನ್ನು ಹಿಡಿಯುವರು. ಪಗಡೆ, ರಥಗಳ ಜೂಜು ಇವು ಅವರಿಗೆ ಬಹು ಪ್ರಿಯವಾದ ಆಟಗಳು.

ನಿಷ್ಕ, ಕೃಷ್ಣಲ, ಶತಮಾನ ಎಂಬ ನಾಣ್ಯಗಳಿದ್ದುವು. ಗೋವುಗಳಿಗೆ ಬಹಳ ಮರ್ಯಾದೆ. ಜನರಿಗೆ ದಾನಧರ್ಮಗಳಲ್ಲಿ ಬಹು ವಿಶ್ವಾಸ. ಪುರುಷ ದೇವತೆಗಳನ್ನೂ ಕೆಲವು ಸ್ತ್ರೀದೇವತೆಗಳನ್ನೂ ಬಲಿ, ದಾನ, ಜಪ, ಹೋಮ, ತರ್ಪಣಗಳಿಂದ ಆರಾಧಿಸುವರು. ಪಾತಕಗಳನ್ನು ಮಾಡಿದವರು ಪ್ರಾಯಶ್ಚಿತ್ತಮಾಡಿಕೊಳ್ಳುವರು; ಅಥವಾ ದಂಡವನ್ನು ಕೊಡುವರು. ಮಳೆಯಾಗುವುದರಿಂದ ಹಿಡಿದು ಮಕ್ಕಳಾಗುವವರೆಗೂ ಸುಖಪ್ರಾಪ್ತಿ ದುಃಖನಿವೃತ್ತಿಗಳನ್ನೆಲ್ಲ ಹೋಮ ಹವನಗಳು, ಮಂತ್ರಗಳು ಸಾಧಿಸಿಕೊಡಬಲ್ಲವೆಂಬ ನಂಬಿಕೆ ಜನರಲ್ಲಿದ್ದಿತು. ಜನ್ಮಾಂತರಗಳು, ಕರ್ಮಫಲಗಳು ಉಂಟೆಂದು ನಂಬಿದ್ದರು. ಮೃತದೇಹಗಳನ್ನು ಸುಡುವುದೂ ಹೂಳುವುದೂ ವಾಡಿಕೆಯಲ್ಲಿದ್ದಿತು. ಜಾತಾಶೌಚ, ಮೃತಾಶೌಚ, ಶ್ರಾದ್ಧಗಳು ಆಚರಣೆಯಲ್ಲಿದ್ದುವು.*

## ಆರ್ಯೀಕರಣ

"ದಖನ್, ದಕ್ಷಿಣ ಇಂಡಿಯಗಳ ಆರ್ಯೀಕರಣವು ಮೌರ್ಯ ಸಾಮ್ರಾಜ್ಯ ಸ್ಥಾಪನಕ್ಕಿಂತ ಮುಂಚೆಯೇ ಆರಂಭವಾಗಿದ್ದಿತು."

* * *

* ವಿಸ್ತಾರವಾಗಿ ತಿಳಿಯಬೇಕೆನ್ನುವವರು *Cambridge History of India*, I, Chapters IV & V ಓದಬಹುದು.

"ಈ ಕಾಲವು (ಕ್ರಿ. ಪೂ. ಎಂಟನೆಯ ಶತಮಾನ) ದಕ್ಷಿಣ ಇಂಡಿಯದಲ್ಲಿ ಆರ್ಯರ ನಾಗರಿಕತೆಯು ಬೇರೂರಿದ ಕಾಲವೆನ್ನಬಹುದು. ಉತ್ತರದಲ್ಲಾದಂತೆ ಇಲ್ಲಿಯೂ ಹಿಂದಿನ ಕಾಲದಿಂದ ನೆಲಸಿದ್ದ ದ್ರಾವಿಡರ ಸಂಪ್ರದಾಯಾದಿಗಳು ಸಂಪೂರ್ಣವಾಗಿ ಕಬಳಿತವಾಗಿ ಜೀರ್ಣವಾಗಿಹೋದುವು. ದ್ರಾವಿಡ ಭಾಷೆಗಳು ವ್ಯವಹಾರ ಭಾಷೆಗಳಾಗಿ ನಿಂತರೂ, ಕುಲಕುಲದ ಲಕ್ಷಣಗಳು ಹಾಗೆಯೇ ನಿಂತಿದ್ದರೂ, ಅಭಿವೃದ್ಧಿಗೆ ಬರುವ ಸಾಮಾಜಿಕ ರಾಜಕೀಯ ಕಾರ್ಯಕಲಾಪಗಳಿಗೆಲ್ಲ ಆರ್ಯರ ಭಾವನೆಗಳೇ ಮೂಲಕಾರಣವಾದುವು. ಇದೆಲ್ಲದರ ಫಲವಾಗಿ ಇಂದು ದಕ್ಷಿಣ ಇಂಡಿಯದ ಸಾಹಿತ್ಯದಲ್ಲಿ ಆಗಲಿ, ಕಲಾಪ್ರಪಂಚದಲ್ಲಿ ಆಗಲಿ, ರಾಜಕೀಯ ಚರಿತ್ರೆಯ ಘಟನಾವಳಿಗಳಲ್ಲಿ ಆಗಲಿ ಆ ಪುರಾಣ ಕಾಲದ ಅವಶೇಷವಾಗಿ ಏನೂ ಉಳಿದಿಲ್ಲ."

"ನಮಗೆ ತಿಳಿದಿರುವಂತೆ ದಕ್ಷಿಣದ ಅತಿ ಪ್ರಾಚೀನ ಕಾಲದ ರಾಜವಂಶಗಳು ಮಹಾಭಾರತದ ವೀರರಾದ ಆರ್ಯಕ್ಷತ್ರಿಯರ ರಾಜವಂಶದವರು. ಪುರಾಣಕಾಲದ ದ್ರಾವಿಡರ ದೇವತೆಗಳು ಬ್ರಾಹ್ಮಣ ಹಿಂದೂ ಕುಲದಲ್ಲಿ ಸೇರಿಹೋದುವು. * * * ನಾಗರಿಕವಾದ ದ್ರಾವಿಡ ಸಮಾಜವು ಬರುಬರುತ್ತ ಧಾರ್ಮಿಕ ಸಾಮಾಜಿಕ ರಾಜಕೀಯ ವ್ಯವಸ್ಥೆಗಳಲ್ಲೆಲ್ಲ ಆರ್ಯರನ್ನು ಅನುಸರಿಸಿತು. ದ್ರಾವಿಡ ಕಲಾ ಶಿಲ್ಪಗಳೂ ವೈದಿಕಾದರ್ಶಮಯವಾದುವು; ಶಿಲ್ಪಿಗಳು ಆರ್ಯಾಚಾರ್ಯ ಸಂಪ್ರದಾಯಗಳನ್ನು ಅನುಸರಿಸಿದರು. . . ."

"ಆರ್ಯರು ಅನೇಕ ಶತಮಾನಗಳವರೆಗೆ ಪರಂಪರಾಗತವಾದ ತಮ್ಮ ಆಧ್ಯಾತ್ಮಿಕ ಸಂಪತ್ತಿಯು ಅನಾರ್ಯ ಸಂಪರ್ಕದಿಂದ ಕಲುಷಿತವಾಗದಂತೆ ದೂರವಾಗಿದ್ದುದು ನಿಜ. ಆದರೂ ಅವರ ಧರ್ಮಶಾಸ್ತ್ರಗಳೂ, ರಾಜ್ಯಾಂಗ ವ್ಯವಸ್ಥೆಗಳೂ, ಧಾರ್ಮಿಕ ಭಾವನೆಗಳೂ ಪ್ರಜಾವರ್ಗದಲ್ಲಿ ಹರಡುತ್ತ ಬಂದುವು; ಆರ್ಯರಕ್ತದ ಬಿಂದುವೊಂದೂ ಬೆರೆಯದ ಲಕ್ಷೋಪಲಕ್ಷ ಜನರ ಜೀವನದ ಹಾಸುಹೊಕ್ಕುಗಳಾದುವು."*

ಈ ಆರ್ಯೀಕರಣವು ಹೇಗೆ ನಡೆಯಿತು ಎಂಬುದನ್ನು ಕುರಿತು ಇನ್ನೊಂದೆಡೆ ಹೀಗೆ ಹೇಳಿದೆ:—

"ಶ್ರುತಿ ಸ್ಮೃತಿಗಳನ್ನು ಆಧಾರವಾಗಿಟ್ಟುಕೊಳ್ಳುವುದು, ಬ್ರಾಹ್ಮಣರ ದೇವರುಗಳನ್ನೂ ಆ ದೇವರುಗಳ ಅವತಾರಗಳನ್ನೂ ಪೂಜಿಸುವುದು, ಗೋವನ್ನು ಗೌರವಿಸುವುದು, ಮದುವೆ ಊಟಗಳಲ್ಲಿ ಕೆಲವು ನಿಯಮಗಳನ್ನು ಅನುಸರಿಸುವುದು, ಶುಭಾಶುಭ ಕರ್ಮಗಳನ್ನು ಬ್ರಾಹ್ಮಣಮುಖವಾಗಿ ನಡೆಸುವುದು, ಇದು

---

* E. B. Havel's *Aryan Rule in India*, Pages 127–28. *cf.* Ind. Ant., 1912, P. 229 ff.

ಬ್ರಾಹ್ಮಣ ಧರ್ಮ (Brahmanism) ವಾದರೆ, 'ಇದು ಇತರರನ್ನು ಸೇರಿಸಿ ಕೊಳ್ಳುತ್ತಿಲ್ಲ; ಬೆಳೆಯುತ್ತಿಲ್ಲ' ಎಂದು ಹೇಳುವುದು ಸರಿಯಲ್ಲ; ಅದು ತನ್ನ ಕ್ಷೇತ್ರ ವನ್ನು ಎರಡು ವಿಧಗಳಲ್ಲಿ ಪರಿಣಾಮಕಾರಿಯಾದ ರೀತಿಗಳಲ್ಲಿ ವಿಸ್ತರಿಸುತ್ತಿದೆ."

"ಜಾತಿ ಕುಲ ಗೋತ್ರಗಳಿಲ್ಲದ ಅನಾರ್ಯರನ್ನು ಗೆದ್ದುಕೊಂಡು ತಮ್ಮವರ ನ್ನಾಗಿ ಮಾಡಿಕೊಳ್ಳುವುದು ಒಂದು ರೀತಿ. ಇದು ಈ ಅನಾರ್ಯಕುಲಗಳು ತಮಗಿಂತ ಉತ್ತಮರಾದವರ ರೀತಿ ನೀತಿಗಳನ್ನು ಅನುಸರಿಸುವುದರಲ್ಲಿ ಆರಂಭವಾಗುತ್ತದೆ. ಅವರು ತಮ್ಮ ರೀತಿ ನೀತಿಗಳನ್ನೂ ಪೂಜಾಪದ್ಧತಿಗಳನ್ನೂ ಬದಲಾಯಿಸಬೇಕೆಂದು ಯಾರೂ ಹೇಳುವುದಿಲ್ಲ. ಆದರೂ ಅವರು ತಾವಾಗಿ ಜಾಗ್ರತೆಯಾಗಿ ಹಿಂದೂ ಪದ್ಧತಿಗಳನ್ನು ಆಚಾರ ಸಂಪ್ರದಾಯಗಳನ್ನು ಅವಲಂಬಿಸಿ ಬ್ರಾಹ್ಮಣ ಭಕ್ತರಾಗು ವುದರಿಂದ ಅವರ ಧರ್ಮವೂ ಜೀವನವೂ ಬದಲಾಯಿಸಿಹೋಗುತ್ತವೆ. ಇದುವರೆಗೆ ಶುಭಾಶುಭಗಳಿಗೆ ಬ್ರಾಹ್ಮಣರನ್ನು ಕರೆಯುದವರು ಈಗ ಪ್ರತಿಯೊಂದಕ್ಕೂ ಬ್ರಾಹ್ಮಣನನ್ನು ಕರೆಯುತ್ತಾರೆ. ಊಟ, ಮದುವೆ ಮೊದಲಾದ ನಿತ್ಯನೈಮಿತ್ತಿಕ ಸಂದರ್ಭಗಳಲ್ಲೆಲ್ಲಾ ಬ್ರಾಹ್ಮಣರ ಪದ್ಧತಿಗಳನ್ನು ಅನುಸರಿಸುತ್ತಾರೆ; ಬರು ಬರುತ್ತ ಅವರದೇ ಒಂದು ಜಾತಿಯಾಗುತ್ತದೆ."

"ಮೊದಲು ದೇವಾಲಯ ಪ್ರವೇಶವು ದೊರೆಯದಿದ್ದ ಈ ಜನರಿಗೆ ಹೊಸ ಜಾತಿಯಾದ ಮೇಲೆ ದೇವಾಲಯ ಪ್ರವೇಶವು ದೊರೆಯುತ್ತದೆ. ಮೊದಲು ಹಣ್ಣು ಕಾಯಿ ಮಾಡಿಸಲೂ ಅವಕಾಶವಿಲ್ಲದಿದ್ದವರಿಗೆ ಈಗ ದೇವರ ದರ್ಶನವು ದೊರೆಯುತ್ತದೆ. ಅವರು ಸುಳಿದರೆ ದೂರ ಹೋಗುತ್ತಿದ್ದ ನಿಷ್ಠಾವಂತರೂ ಅವರೊಡನೆ ಮಾತುಕಥೆಗಳ ನ್ನಾಡುತ್ತಾರೆ. ಆ ಜಾತಿಯವರು ಈ ನಿಷ್ಠರೊಬ್ಬರನ್ನು ತಮ್ಮ ಗುರುವನ್ನಾಗಿ ಮಾಡಿಕೊಳ್ಳುತ್ತಾರೆ. ತಮ್ಮ ಕ್ಷುದ್ರದೇವತೆಗಳನ್ನು ಬ್ರಾಹ್ಮಣರ ದೇವತೆಗಳ ಅವತಾರಗಳನ್ನಾಗಿ ಮಾಡಿಕೊಳ್ಳುತ್ತಾರೆ. ಈ ಗುರುವಾದವನು ಅರ್ಚಕನಿಗಿಂತ ಮಹಾಂತನಿಗಿಂತ ನೀತಿ ಧರ್ಮಗಳಲ್ಲಿ ಉತ್ತಮನಾಗಿದ್ದು ಅವರಿಗೆ ಧರ್ಮೋಪದೇಶಾದಿ ಗಳನ್ನು ಮಾಡುತ್ತಾನೆ. ಇವೆಲ್ಲದರಿಂದ ಅವರ ಮನಸ್ಸಿಗೆ ಉಲ್ಲಾಸವಾಗಿ ಬ್ರಾಹ್ಮಣರ ಪರಮಭಕ್ತರಾಗಿ ಹೋಗುತ್ತಾರೆ."

"ಎರಡನೆಯ ವಿಧವು ಶರಣರಿಂದ ನಡೆಯುವುದು. ಹೊಸ ಹೊಸ ಶರಣರು ಹುಟ್ಟಿಬಂದು ತಮ್ಮದೇ ಒಂದು ಪಂಥವನ್ನು ಹೊಸದಾಗಿ ಸೃಷ್ಟಿಸಿಕೊಳ್ಳುತ್ತಾರೆ. ಈ ಶರಣರ ಉಪದೇಶಗಳನ್ನು ಕೇಳಿ, ಇವರ ಮಹಿಮೆಗಳನ್ನು ನೋಡಿ, ಇವರು ದೇವರ ಅವತಾರವೆಂದು ನಂಬಿ, ಅನೇಕಾನೇಕರು ಅವರ ಶಿಷ್ಯರೂ ಭಕ್ತರೂ ಆಗುತ್ತಾರೆ. ಈ ಶರಣರನೇಕರು ಜಾತಿ ಪಂಥಗಳನ್ನು ಗಮನಿಸುವುದೇ ಇಲ್ಲ; ಚಂಡಾಲಾದಿ ಭೇದಗಳನ್ನೂ ಲಕ್ಷಿಸದೆ ಉಪದೇಶಮಾಡುತ್ತಾರೆ. ಕ್ರೈಸ್ತರೋ

ಮುಹಮ್ಮದೀಯರೋ ಆಗಿಹೋಗುತ್ತಿದ್ದವರನೇಕರು ಈ ಶರಣರ ಶಿಷ್ಯರಾಗುತ್ತಾರೆ. ಈ ಚಳುವಳಿಗಳೆಲ್ಲ ಮೊದಮೊದಲು ಬ್ರಾಹ್ಮಣರಿಗೆ ವಿರೋಧವಾಗಿಯೇ ಇರುತ್ತವೆ. ಇಂತಹ ಚಳುವಳಿಗಳೆಲ್ಲ ಬ್ರಾಹ್ಮಣ ಧರ್ಮದಿಂದ ಸಿಡಿದುಬಂದಿರುವವರಿಂದಲೇ ಆರಂಭವಾಗಿವೆಯಾದರೂ ಎಲ್ಲವೂ ಮತ್ತೆ ಅತ್ತಕಡೆಗೇ ತಿರುಗಿವೆ; ಅಲ್ಲಿಯೇ ಕೊನೆಗಂಡಿವೆ. ಈ ಶರಣರು ಯೋಗಿಗಳೋ ಬೈರಾಗಿಗಳೋ ಆಗಿದ್ದು ಕೀಳು ಜನರ ಪೂರ್ತಿಪೂಜೆಗಳಿಗೂ ಅಂಧ ಶ್ರದ್ಧೆಗಳಿಗೂ ಆಧ್ಯಾತ್ಮಿಕಾರ್ಥವೊಂದನ್ನು ಕಲ್ಪಿಸುತ್ತಾರೆ. ಆದರೆ ಈ ಶರಣರು ಬೌದ್ಧ ಜೈನರಂತೆ ಶಾಶ್ವತವಾಗಿ ಬೇರೆಯಾಗಿ ನಿಲ್ಲುವ ಸಾಮರ್ಥ್ಯವುಳ್ಳಂತಹ ಭಾರಿಯ ಮತಗಳನ್ನು ಮಾತ್ರ ಸ್ಥಾಪಿಸಲಾರರು. ಆ ಕೀಳು ಜಾತಿಯ ಭಕ್ತರನ್ನು ಉದ್ಧರಿಸುವುದಕ್ಕೆ, ಆವರ ಆಧ್ಯಾತ್ಮಿಕದ ಹಂಬಲವನ್ನು ತೀರಿಸುವುದಕ್ಕೆ ಬೇಕಾದ ಕೆಲವು ಧರ್ಮಗಳನ್ನೂ ದೇವತೆಗಳನ್ನೂ ಸಂಪಾದಿಸಿಕೊಂಡು ಈ ಹೊಸ ಮತಗಳು ಮತ್ತೆ ಬ್ರಾಹ್ಮಣಧರ್ಮದಲ್ಲಿ ಸೇರಿಹೋಗುತ್ತವೆ.''*



* Sir A. C. Lyall, *Asiatic Studies*, First Series: Religious and Social (III Edition: 1907), Chapter V, wherein he states "Chapter V, reproduces an Essay in which I ventured upon some dissent from certain views put forth by professor Max Müller, in a lecture delivered in West Minister Abbey, regarding the vitality of Brahmanism, and its classification as a non-missionary religion .... All that I desire, with deference, to uphold is that Brahmanism is a religion by no means dead or even moribund, but that on the contrary, members are constantly brought within its pale, and are allowed to share more or less in its ritual."

The quotations herein are from the same, pages 135-143.

